ನವೋದಯ ಪ್ರಚಾರ ಪುಸ್ತಕಮಾಲೆ—೧೭

# ಮುಳಿಯ ತಿಮ್ಮಪ್ಪಯ್ಯ

ಏರ್ಯ ಲಕ್ಷ್ಮೀನಾರಾಯಣ ಆಳ್ವ



ಮಹಾತ್ಮಾ ಗಾಂಧಿ
ಮೆಮೋರಿಯಲ್ ಕಾಲೇಜು
ಉಡುಪಿ - 2

ನವೋದಯ ಪ್ರಚಾರ ಪುಸ್ತಕಮಾಲೆ—೧೭

# ಮುಳಿಯ ತಿಮ್ಮಪ್ಪಯ್ಯ

ಏರ್ಯ ಲಕ್ಷ್ಮೀನಾರಾಯಣ ಆಳ್ವ.

ಮಹಾತ್ಮಾ ಗಾಂಧಿ
ಮೆಮೋರಿಯಲ್ ಕಾಲೇಜು
**ಉಡುಪಿ - 2**

# ನವೋದಯ ಪ್ರಚಾರ—ಇಂದು

ನಮ್ಮ ನವೋದಯ ಪ್ರಚಾರ ಪುಸ್ತಕ ಮಾಲೆ ಕಾಲೇಜಿನ ವಾರ್ಷಿಕ ಸಾಹಿತ್ಯೋತ್ಸವ ಸಂದರ್ಭದಲ್ಲಿ ಮಾಡಿದ ಭಾಷಣಗಳನ್ನು ಮಾತ್ರವೇ ಅಲ್ಲದೆ ಕನ್ನಡ ಸಾಹಿತಿ—ಕಲಾವಿದರ ಕುರಿತು ಲಿಖಿತ ಪ್ರಬಂಧಗಳನ್ನೂ ಪ್ರಕಟಿಸಲು ತೊಡಗಿ ಹದಿನೈದು ವರ್ಷಗಳಾದುವು 'ಲಾಭ ಬೇಡ, ನಷ್ಟವಿಲ್ಲ' ಎಂಬ ಆರ್ಥಿಕ ತಳಹದಿಯಲ್ಲಿ ಕಾಲೇಜು ಕೈಗೊಂಡ ಈ ಪ್ರಕಟನ ಸಾಹಸಕ್ಕೆ ಕನ್ನಡಿಗರು ಸಾಕಷ್ಟು ಪ್ರೋತ್ಸಾಹ ನೀಡಿದ್ದಾರೆ.

ಪ್ರಕಟನೆಯ ಬಗ್ಗೆ ನಾವು ಯಾವ ನಿಯಮಿತತೆಯನ್ನೂ ಇಟ್ಟುಕೊಂಡಿಲ್ಲವಾದರೂ ಇದುವರೆಗೆ ಸುಮಾರು ಹದಿನೈದು ಪುಸ್ತಕಗಳು ಅಚ್ಚಾಗಿವೆ. ಅದರಲ್ಲಿ ಎಷ್ಟೋ ತೀರಿವೆ. ಮುಂಬರುವ ಜಿಲ್ಲಾ ಸಾಹಿತ್ಯ ಸಮ್ಮೇಳನದ ನೆಪದಲ್ಲಿ ಮತ್ತೊಮ್ಮೆ ಈ ಜಿಲ್ಲೆ ಕನ್ನಡ ನಾಡಿನ ಸೇವೆಗೆ ಅಣಿಗೊಳಿಸಿದ ಮಹನೀಯರ ಪರಿಚಯವನ್ನು ಪ್ರಾಂಕ್ತವಾಗಿ ಪ್ರಕಟಿಸಬೇಕಂಬ ನಮ್ಮ ಆಶಯ ದೊಡ್ಡದೆ. ಹಲವು ಮಂದಿ ಲೇಖಕರು ಇದರಲ್ಲಿ ಸಹಕರಿಸಿದ್ದಾರೆ. ಇದುವರೆಗೆ ಪ್ರಕಟಿತವಾದ (ಮರುಪ್ರಕಟಿತವಾದ) ಗೋವಿಂದ ಪೈ, ಕಡೆಂಗೋಡ್ಲು, ಸೇಡಿಯಾಪು, ಕಾರಂತ ಅವರ ಜತೆಗೆ ಮುಳಿಯ ತಿಮ್ಮಪ್ಪಯ್ಯ, ಪಂಜೆ ಮಂಗೇಶ ರಾವ್, ಹುರುಳಿ ಭೀಮರಾವ್, ಉಗ್ರಾಣ ಮಂಗೇಶ ರಾವ್, ಎಸ್. ವೆಂಕಟರಾಜ, ಕಯ್ಯಾರ ಕಿಞ್ಞಣ್ಣ ರೈ, ಅವರನ್ನೂ ಪೋಣಿಸಿದ ಬಳಿಕ ಜಿಲ್ಲೆಯ ಸಾಹಿತ್ಯ ವ್ಯವಸಾಯದ ಒಂದು ಸಮಗ್ರ ಚಿತ್ರ ಮೂಡುವುದೆಂದು ನಾವು ಆಶಿಸಿದ್ದೇವೆ.

ಪುಸ್ತಕ ಪ್ರಕಟನೆಯಂ ಲೇಖಕರು ಮಾಲೆಯ ಇತಿಮಿತಿ ಮತ್ತು ನಿಯಮಿತ ಅವಧಿಯೊಳಗೇನೆ ತಮ್ಮ ಕೃತಿಯನ್ನು ರಚಿಸಿ ಉಪಕರಿಸಿದ್ದಾರೆ. ಅವರಿಗೂ, ಸುಂದರವಾಗಿ ಮುದ್ರಿಸಿಕೊಟ್ಟ ಶಾರದಾ ಪ್ರೆಸ್, ಅವರಿಗೂ ನಮ್ಮ ಕೃತಜ್ಞತೆ.

ಸಪ್ಟೆಂಬರ–18, 1971

**ಕು. ಶಿ. ಹರಿದಾಸ ಭಟ್ಟ**
ಪ್ರಧಾನ ಸಂಪಾದಕ

# ಎರಡು ಮಾತು

ಸನ್ಮಾನ್ಯ ಮಿತ್ರ ಪ್ರೊ. ಕು. ಶಿ. ಹರಿದಾಸ ಭಟ್ಟರ ಒತ್ತಾಯ ಅಲ್ಲದೆಹೋಗಿದ್ದರೆ ಈ ಕೃತಿ ನನ್ನಿಂದ ರಚಿತವಾಗುತ್ತಿದ್ದಿಲ್ಲ. ನಾನು ತಪ್ಪಿಸಿಕೊಳ್ಳಬಯಸಿದರೂ ಅವರು ಬಿಡಲಿಲ್ಲ. ಕುಶಲ ಬೇಟೆಗಾರನಂತೆ ತಾನು ಮಿಣ್ಣನೆ ನನ್ನನ್ನು ಬೋನು ಸೇರಿಸಿದರು. ಈಗ ಅನ್ನಿಸುತ್ತಿದೆ 'ಅವರ ಒತ್ತಾಯ ನನ್ನ ಭಾಗ್ಯವಾಗಿ ಪರಿಣಮಿಸಿತು' ಎಂದು. ಈ ಮಾತು ನಾನು ಹೇಳುತ್ತಿರುವುದು, ಆ ಒತ್ತಾಯ ಈ ಕೃತಿ ರಚನೆಗೆ ಕಾರಣವಾಯಿತು ಎಂಬುದಕ್ಕಾಗಿ ಅಲ್ಲ; ಅದರಿಂದಾಗಿ ಮುಳಿಯರ ಕುರಿತು ಕೂಲಂಕಷವಾಗಿ ತಿಳಿಯುವ ಪುಣ್ಯ ನನ್ನದಾಯಿತು ಎಂಬುದಕ್ಕಾಗಿ. ದುಃಖದ ಕಡುನೀಲಿಮೆಯ ಮುಂದೆ ಸೌಮ್ಯ ಸುಂದರವಾಗಿ ಬೆಳಗುವ ಚಂದಿರನಂತೆ, ಕ್ಷೀಣ, ವೃದ್ಧಿಗಳಿಗೆ ಒಳಗಾದರೂ ತಣ್ಪನ್ನು ಬಿಡದ ಮುಳಿಯರ ಬಾಳು ನಿಜವಾಗಿಯೂ ಹೃದಯಸ್ಪರ್ಶಿಯಾದುದು. ವೈವಿಧ್ಯಮಯವಾದುದು. ಚೇತೋಹಾರಿಯಾದುದು. ಈ ಕೃತಿ ಅದರೆಡೆಗೆ ಬೊಟ್ಟು ತೋರಿಸುವ ಬೆರಳು ಮಾತ್ರ.

ಮುಳಿಯ ತಿಮ್ಮಪ್ಪಯ್ಯನವರ ಕುರಿತು "ಶ್ರದ್ಧಾಂಜಲಿ" ಎಂಬ ಸ್ಮರಣ ಗ್ರಂಥವನ್ನೂ, ಅವರ ಕೆಲವು ಲೇಖನೋಪನ್ಯಾಸಗಳನ್ನು ಸೇರಿಸಿ "ಕನ್ನಡ ಸಾಹಿತ್ಯ ಮತ್ತು ಇತರ ಉಪನ್ಯಾಸಗಳು" ಎಂಬ ಹೆಸರಲ್ಲಿ ಮತ್ತೊಂದು ಹೊತ್ತಗೆಯನ್ನೂ ಪ್ರಕಟಿಸಿರುವ ಶ್ರೀ ತೆಕ್ಕುಂಜ ಗೋಪಾಲಕೃಷ್ಣ ಭಟ್ಟ, ಎಂ. ಎ., ಇವರನ್ನು ಕಂಡು ಈ ಎರಡು ಗ್ರಂಥಗಳಲ್ಲಿರುವ ವಿಷಯಂಗಳನ್ನು ಬಳಸಿಕೊಳ್ಳಲು ಅನುಮತಿ ಕೇಳಿದಾಗ ಅತಿ ಸಂತೋಷದಿಂದ ಒಪ್ಪಿಗೆ ನೀಡಿದರು, ಮಾತ್ರವಲ್ಲ ನನಗೆ ಬೇಕಾಗಿದ್ದ ಮುಳಿಯರ ಕೆಲವು ಕೃತಿಗಳನ್ನು ಕೊಟ್ಟು ಉಪಕರಿಸಿದರು. ಅವರಿಗೆ ನಾನು ಋಣಿ. 'ನಡೆದು

ಬಂದ ದಾರಿ'ಯ ಮೂರನೆಯ ಸಂಪುಟದಲ್ಲಿ ಮುಳಿಯರ
ಕುರಿತು ಅವರ ಹಿರಿಯ ಮಗ ಶ್ರೀ ಎಂ. ಕೇಶವ ಭಟ್ಟರು
ಬರೆದಿರುವ ಕೆಲಭಾಗಗಳನ್ನು ಇಲ್ಲಿ ಎತ್ತಿಕೊಂಡಿದ್ದೇನೆ. ಅವರಿಗೆ
ನನ್ನ ವಂದನೆಗಳು. ಮುಳಿಯರ ಸಾಂಸಾರಿಕ ಜೀವನದ ಎಷ್ಟೋ
ವಿವರಗಳನ್ನಿತ್ತವರು ಅವರ ಎರಡನೆಯ ಮಗ ಶ್ರೀ ಮುಳಿಯ
ಮಹಾಬಲ ಭಟ್ಟ ಎಡ್ವಕೇಟ್ ಇವರು. ಅವರಿಗೆ ನಾನು
ಕೃತಜ್ಞ. ಮುಳಿಯರು ಮನೆ ಬಿಟ್ಟು ತಿರುವನಂತಪುರಕ್ಕೆ
ಹೋಗಿದ್ದಾಗ, ಆಗಲೇ ತಿರುವನಂತಪುರದ ಮಹಾರಾಜಾ ಸಂಸ್ಕೃತ
ಕಾಲೇಜಿನಲ್ಲಿ ಅಭ್ಯಾಸ ಮಾಡುತ್ತಿದ್ದ ಮಹೋಪಾಧ್ಯಾಯರಾದ
ಶ್ರೀ ಕೆ. ಎಸ್. ಪರಮೇಶ್ವರ ಶಾಸ್ತ್ರೀ ಇವರು ಮುಳಿಯರ
ಬಾಳಿನ ಅಜ್ಞಾತ ದಿನಗಳ ಮೇಲೆ ಸಾಕಷ್ಟು ಬೆಳಕು ಚೆಲ್ಲಿ
ಮಹೋಪಕಾರ ಮಾಡಿದ್ದಾರೆ. ಮುಳಿಯರಿಗಿಂತಲೂ ವಯಸ್ಸಿ
ನಲ್ಲಿ ಎರಡು ವರ್ಷ ದೊಡ್ಡವರಾದ ಆ ಹಿರಿಯರ ಬಳಿ
ಮುಳಿಯರ ಕುರಿತು ತಿಳಿಯಲು ಈ ಕಿರಿಯ ಹೋದಾಗ,
ವೃದ್ಧಾಪ್ಯ ಮತ್ತು ಅಸೌಖ್ಯದಿಂದ ಸೋತಿದ್ದರೂ ಸಂತೋಷ
ದಿಂದ ತಮ್ಮ ನೆನಪಿನ ಬುತ್ತಿಯನ್ನು ಬಿಚ್ಚಿ ನನಗೆ ಉಣಬಡಿಸುವ
ಉದಾರತೆ ತೋರಿದ್ದಕ್ಕಾಗಿ ಅವರಿಗೆ ನಾನು ಮಣಿಯುತ್ತೇನೆ.
ಹಸ್ತಪ್ರತಿಯನ್ನು ನೋಡಿ ಮೆಚ್ಚು ನುಡಿದ ಆತ್ಮೀಯ ಮಿತ್ರ
ಶ್ರೀ ಅಮೃತ ಸೋಮೇಶ್ವರರಿಗೆ ವಂದನೆಗಳು. ಮುದ್ರಣಕ್ಕೆ
ಉತ್ತಮ ಹಸ್ತಪ್ರತಿಯನ್ನು ತಯಾರಿಸಿಕೊಟ್ಟ ಕಿರಿಯ ಮಿತ್ರ
ಶ್ರೀ ಎ. ಚಂದ್ರಶೇಖರಮಯ್ಯರಿಗೆ ನನ್ನ ಉಪಕಾರ ಸ್ಮರಣೆಗಳು.

ಐರ್ಯ ಬೀಡು, ಐರ್ಯ ಲಕ್ಷ್ಮೀನಾರಾಯಣ ಆಳ್ವ
ಬಂಟ್ವಾಳ, ದ. ಕ.
ಸಪ್ಟಂಬರ 1971



ಶ್ರೀ ಶ್ರೀ ಮುಳಿಯ ತಿಮ್ಮಪ್ಪಯ್ಯನವರು

# ಮುಳಿಯ ತಿಮ್ಮಪ್ಪಯ್ಯ

"ಸಮಸ್ತ ಕನ್ನಡ ನಾಡಿಗೆ ಸ್ಫೂರ್ತಿ ಕೀರ್ತಿಗಳನ್ನೊದಗಿಸಿದ ಚತುರಂಗಬಲ ಭಯಂಕರನು, ಕವಿತಾ ಗುಣಾರ್ಣವನು, ನಾಡೋಜನು. ಆ ಮಹಾವಿಭೂತಿ ಪುರುಷನ ಸಹಸ್ರ ವಾರ್ಷಿಕ ಸ್ಮಾರಕೋತ್ಸವವನ್ನು ನೆರವೇರಿಸುವುದಕ್ಕೆ, ಹೊಸದೊಂದು ಹುರುಪನ್ನು ಕನ್ನಡ ನಾಡಿನಲ್ಲಿ ತುಂಬಿಸುವುದಕ್ಕೆ ಅದೇ 'ಸಾಜದ ಪುಲಿಗೆರೆಯ ತಿರುಳ ಕನ್ನಡ' ನಾಡಿನಲ್ಲಿ ಈಗ ಕೂಡಿದ್ದೇವೆ. ಗುರಿಗಳೆರಡೂ ಉತ್ತರೋತ್ತಮಗಳೇ ಸರಿ. ಆದರೆ ಇಂಥ ಸಮಾರಂಭಕ್ಕೆ ಅಧ್ಯಕ್ಷನಾಗಬೇಕೆಂದು ಪೂಜ್ಯರಾದ ಸ್ವಾಗತ ಸಮಿತಿಯವರು ನನಗೆ ಅಪ್ಪಣೆಗೊಟ್ಟುದು ಮಾತ್ರ ಆ ಸಾಲಿಗೆ ಒಪ್ಪುವಂತೆ ತೋರುವುದಿಲ್ಲ. ಇದೊಂದು ಬರಿಯ ಔಪಚಾರಿಕಾಂಕುರ ಫೆಂದು ಬಗೆಯಬಾರದು. ನಾಡೋಜನ ಭಕ್ತರೊಳಗೆ ನಾನೂ ಒಬ್ಬ ಬಡ ಭಕ್ತನು, ಎಂಬಲ್ಲಿ ಸಂದೇಹವಿಲ್ಲ. ಆದರೂ. ಇಲ್ಲಿ ಅಧ್ಯಕ್ಷನಾಗಿರಲಿಕ್ಕೆ ನನ್ನ ಯೋಗ್ಯತೆ ಏನು, ಹೇಗೆ, ಎಂಬ ತಿಳಿವು ನನಗೇ ಇರುವಷ್ಟು ಸ್ವಾಗತ ಮಂಡಳಿಯವರಿಗೆ ಇರಲಾರದು, ಎಂದರೆ ತಪ್ಪಾದೀತೆ? ಕಾರ್ಯಾಧ್ಯಕ್ಷರು ನನಗೆ ಬರೆದ ಪತ್ರದಲ್ಲಿ ಯಾವುದನ್ನು ಹೇಳಿಕೊಳ್ಳಲಿಕ್ಕೂ ನನಗೆ ಎಡೆಯೇ ಇರಲಿಲ್ಲ. 'ಉಗುಳಿದರೆ ಶುದ್ಧಿ ಕೆಡುವುದು; ನುಂಗಿದರೆ ಗಂಟಲು ಸುಡುವುದು' ಎಂಬವನ ಅವಸ್ಥೆ ನನ್ನದಾಯಿತು. ಗಂಟಲು ಸುಟ್ಟರೂ ಸುಡಲಿ, ಉಗುಳಿ ಶುದ್ಧಿಗೆಡಿಸಲಾಗದು ಎಂದು ನಿರ್ಧರಿಸಿದೆನು; ಆಮಂತ್ರಣವನ್ನು ಶಿರಸಾವಹಿಸಿದೆನು. ಈ ಸೇವೆಯಲ್ಲಿ ಬತ್ತದೊಡನಿರುವ ಜಳ್ಳನ್ನು ಹಾರಿಸಿಕೊಳ್ಳುವುದೆಂದಷ್ಟೇ ಭಾವಿಸಬೇಡಿರಿ; ಜಳ್ಳಿನೊಡನೆ ಇರಬಹುದಾದ ಬತ್ತವನ್ನು ಆರಿಸಿಕೊಳ್ಳುವ ತೊಡಕೂ ಆಗಬಹುದು. ಹೇಗಿದ್ದರೂ ಹಿಂದಣ ಮಮಕಾರದಿಂದಲೇ ನನ್ನ ನ್ಯೂನತೆಗಳನ್ನೆಲ್ಲಾ ಪರಿಹರಿಸಿಕೊಳ್ಳುವಿ

ರೆಂದು ಪ್ರಾರ್ಥಿಸುತ್ತಿದ್ದೇನೆ."—ಸಾವಿರದ ಒಂಭೈನೂರ ನಲುವತ್ತೊಂದನೆಯ ಇಸವಿ ದಶಂಬರ ತಿಂಗಳ ಇಪ್ಪತ್ತನಾಲ್ಕರಂದು ಲಕ್ಷ್ಮೀಶ್ವರದಲ್ಲಿ ನಡೆದ ಆದಿ ಪಂಪನ ಸಹಸ್ರ ಸಾಂವತ್ಸರಿಕೋತ್ಸವದ ಅಧ್ಯಕ್ಷ ಭಾಷಣ ಮಾಡುತ್ತ ಪಂಡಿತ ಮುಳಿಯ ತಿಮ್ಮಪ್ಪಯ್ಯನವರು ಈ ಮಾತನ್ನು ಹೇಳಿದರು.

ಮೇಲಿನ ಮಾತು ಮುಳಿಯ ತಿಮ್ಮಪ್ಪಯ್ಯನವರ ವಿದ್ವತ್ತಿನ ಜೊತೆಗಿದ್ದ ವಿನಯಕ್ಕೆ; ಪಾಂಡಿತ್ಯದ ಒಡನಿದ್ದ ಸರಸತೆಗೆ ಸಾಕ್ಷಿಯಾಗಿದೆ. ಆ ದಿನಗಳಲ್ಲಿ—ಆ ದಿನಗಳಲ್ಲಿ ಎಂದೇನು ಇಂದು ಕೂಡಾ ಮುಳಿಯರ ಹಾಗೆ ಪಂಪ ಕವೀಂದ್ರ ರುಂದ್ರವಚನಾಮೃತವಾರ್ಧಿಯನೀಸಿದ ಸಾಹಸಿಗರು ಬೇರಿಲ್ಲ. ಪಂಪನ ಆಳ ವಿಸ್ತಾರಗಳನ್ನು ಅವರಷ್ಟು ವ್ಯಾಪಕವಾಗಿ ಕಂಡವರೂ, ಉಂಡವರೂ ಮತ್ತಾರೂ ಇಲ್ಲ. ಅದರ ಸಾರವನ್ನು ಕನ್ನಡನಾಡಿಗೆ ಈ ಗಾತ್ರದಲ್ಲಿ ಉಣಬಡಿಸಿದವರೂ ಇನ್ನೊಬ್ಬರಿಲ್ಲ. ಆ ಹೊತ್ತಿಗಾಗಲೇ ಮುಳಿಯರ ಬೃಹದ್ಗ್ರಂಥ "ನಾಡೋಜ ಪಂಪ"ವೂ. "ಆದಿ ಪುರಾಣ ಸಂಗ್ರಹ". "ಸಮಸ್ತ ಭಾರತಸಾರ"ಗಳೂ ಪ್ರಕಟವಾಗಿದ್ದುವು. ಹೀಗಾಗಿ ಪಂಪನ ಹೆಸರಿನ ಜೊತೆಗೆ ನಾಡಿನ ನಾಲಗೆಯಲ್ಲಿ ಪಂಡಿತ ಮುಳಿಯ ತಿಮ್ಮಪ್ಪಯ್ಯನವರ ಹೆಸರೂ ಸುಳಿಯುತ್ತಿತ್ತು. ಇಂತಹ ಒಬ್ಬ ಅರ್ಹನನ್ನು, ವಿದ್ವಾಂಸನನ್ನು. ಅಷ್ಟಲ್ಲದೆ ಇದಕ್ಕಿಂತ ಒಂದು ದಶಮಾನಕ್ಕೂ ಹಿಂದೆಯೇ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ವಹಿಸಿ ಸಮಗ್ರ ನಾಡಿನಿಂದ ಸಂಮಾನಿತನಾಗಿ ಕೀರ್ತಿಶಾಲಿಯಾಗಿದ್ದವನನ್ನು ಪಂಪನ ಸಹಸ್ರ ಸಾಂವತ್ಸರಿಕೋತ್ಸವಕ್ಕೆ ಅಧ್ಯಕ್ಷನನ್ನಾಗಿ ಆರಿಸದೆ ಬೇರಾರನ್ನು ಆರಿಸಬಹುದಾಗಿತ್ತು! ಉತ್ಸವದ ಸ್ವಾಗತ ಸಮಿತಿಯ ಅಧ್ಯಕ್ಷರಾಗಿದ್ದ ಶ್ರೀ ವಿನಾಯಕ ಕೃಷ್ಣ ಗೋಕಾಕರ ಮತ್ತು ಸದಸ್ಯರ ವಿಚಾರ ಸರಿಯಾದ ಸ್ಥಾನಕ್ಕೆ ಸರಿಯಾದ ವ್ಯಕ್ತಿಯನ್ನು ಆಯ್ಕೆ ಮಾಡಿತ್ತು. ಹೀಗಿದ್ದೂ ಮುಳಿಯರು "ಇಲ್ಲಿ ಅಧ್ಯಕ್ಷನಾಗಿರಲಿಕ್ಕೆ ನನ್ನ

ಯೋಗ್ಯತೆ ಏನು; ಹೇಗೆ?" ಎಂದು ಪ್ರಶ್ನಿಸಿಕೊಂಡರು. "ನಾಡೋಜನ ಭಕ್ತರೊಳಗೆ ನಾನೂ ಒಬ್ಬ ಬಡ ಭಕ್ತ" ಎಂದು ತಮ್ಮ ವಿನಯವನ್ನು ಮೆರೆದರು. ಈ ವಿನಯವೇ ಅವರನ್ನು ಸಾಯುವ ತನಕವೂ 'ವಿದ್ಯಾರ್ಥಿ'ಯಾಗಿಸಿತು; ಎತ್ತರಿಸಿತು; ವಿಸ್ತರಿಸಿತು. ಅವರ ಸಹಸ್ರ ಸಂಖ್ಯೆಯ ವಿದ್ಯಾರ್ಥಿಗಳಿಂದ ಪ್ರೀತಿಸಲ್ಪಡುವಂತೆ ಮಾಡಿತು. "ಅವರು ಕನ್ನಡಿಗರ ಮೇಲೆ ಹೊರಿಸಿದ ಋಣದ ಹೊರೆಯೂ ದೊಡ್ಡದು" ಎಂದು ವಿದ್ವಾಂಸರೂ ಉದ್ಗರಿಸುವಂತೆ ಮಾಡಿತು. 'ವಿದ್ಯಾ ದದಾತಿ ವಿನಯಂ' ಎಂಬುದು ಮುಳಿಯರಲ್ಲಿ ಸತ್ಯವಾಗಿತ್ತು.

ಮುಳಿಯರ ವಿನಯಕ್ಕೆಂತೊ ಅಂತೇ ಮೇಲಿನ ಮಾತುಗಳು ಅವರ ಬರಹದ ರೀತಿಗೂ ಮಾದರಿಯಾಗಿವೆ. ಹಳಗನ್ನಡದೆಡೆಗೆ ನಸು ವಾಲುವ, ಹದವಾಗಿ ಸಂಸ್ಕೃತ ಬೆರಸಿದ ಕನ್ನಡ ಅವರದು. ಹೇಳುವುದನ್ನು ಸ್ವಲ್ಪ ಸುತ್ತು ಬಳಸಿ ಹೇಳುವ ಪ್ರವೃತ್ತಿ. ಜತೆಗೆ ನೆಲದ ಆಡುನುಡಿಗಳನ್ನು ಸಂದರ್ಭೋಚಿತವಾಗಿ ಧಾರಾಳವಾಗಿ ಬಳಸಿಕೊಳ್ಳುವ ಆಸಕ್ತಿ. ಮೇಲಿನ ಒಂದು ಪಾರಾದಲ್ಲೇ ಬಂದಿರುವ 'ಉಗುಳಿದರೆ ಶುದ್ಧಿಗೆಡುವುದು, ನುಂಗಿದರೆ ಗಂಟಲು ಸುಡುವುದು' ಎಂಬ ಮಾತಾಗಲೀ; 'ಬತ್ತದೊಡನಿರುವ ಜಳ್ಳನ್ನು ಹಾರಿಸುವುದೆಂದಷ್ಟೆ ಭಾವಿಸಬೇಡಿರಿ; ಜಳ್ಳಿನೊಡನೆ ಇರಬಹುದಾದ ಬತ್ತವನ್ನು ಆರಿಸಿಕೊಳ್ಳುವ ತೊಡಕೂ ಆಗಬಹುದು' ಎಂಬ ಮಾತೇ ಇರಲಿ, ಅವರು ಹುಟ್ಟಿ ಬೆಳೆದ ನೆಲಕ್ಕೆ ಎಷ್ಟು ಋಣಿ ಎಂಬುದಕ್ಕೆ ಸಾಕ್ಷಿ. ಮುಳಿಯರು ಈ ನೆಲದ ಕಂಪನ್ನು ಕಾವ್ಯದ ಪರಿಮಳದೊಡನೆ ಹಿತವಾಗಿ ಬೆರಸಿ, ಸೊಗಸಾದ, ಸುವಾಸಿತ ರೀತಿಯೊಂದನ್ನು ಸಿದ್ಧಪಡಿಸಿಕೊಂಡರು.

ಕವಿರಾಜಮಾರ್ಗಕಾರನಿಂದ ಹಿಡಿದು ಮುದ್ದಣನ ವರೆಗಿನ ಪ್ರಾಚೀನ ಸಾಹಿತ್ಯವೆಲ್ಲವನ್ನು ಅರೆದು ಕುಡಿದರು ಮುಳಿಯ. ಸಂಸ್ಕೃತದಲ್ಲೂ ಅಷ್ಟೇ ಪಾಂಡಿತ್ಯ. ಅವರ ಪರಿಸರದ ಯಾವ

ಮಾತಂ ಅವರ ಗಮನದಿಂದ ತಪ್ಪಿಸಿಕೊಳ್ಳಲಿಲ್ಲ. ಈ ಅಭ್ಯಾಸದ ಪರಿಣಾಮ ಅವರ ಶೈಲಿಯ ಮೇಲಾಯಿತು. ಒರಟಿಲ್ಲದ ಗಂಡು ಶೈಲಿ ಅವರದು. ಪಂಪನ ಶೈಲಿಯನ್ನು ವಿವೇಚಿಸುತ್ತಾ ಮುಳಿಯರೇ ಉದ್ಧರಿಸಿದ "ಶೀಲಸ್ಯ ಇಯಂ ಶೈಲಿ" ಎನ್ನುವುದು ಮುಳಿಯರ ಪಾಲಿಗೂ ಸತ್ಯ. ಅವರ ವೇಷಭೂಷಣಗಳ ಬೆಡಗು, ದೇಹದ ಸೊಗಸು, ಮುಖದ ಗಾಂಭೀರ್ಯ, ಅಂತರಂಗದ ರೀತಿ ಇವೆಲ್ಲವುಗಳಿಗೆ ಅನುಗುಣವಾಗಿತ್ತು ಅವರ ಶೈಲಿ! ಕನ್ನಡ ಸಾರಸ್ವತ ಲೋಕದಲ್ಲಿ ಮುಳಿಯರ ವ್ಯಕ್ತಿತ್ವ ಇನ್ನಿಲ್ಲದಂತಹದು. ಅವರ ಸಾಹಿತ್ಯ ಸೇವೆ ಬೇರಿಲ್ಲದಂತಹುದು.

ಹಿಂದೆ ಪುತ್ತೂರು ತಾಲೂಕಿಗೆ ಸೇರಿದ್ದು, ಈಗ ಬಂಟ್ವಾಳ ತಾಲೂಕಿಗೆ ಸೇರಿರುವ ವಿಟ್ಲ ಪೇಟೆಯಿಂದ ಐದಾರು ಮೈಲು ದೂರದ ಅಳಿಕೆ ಗ್ರಾಮದಲ್ಲಿ ಮುಳಿಯ ಎಂಬ ಒಂದು ಸ್ಥಳವಿದೆ. ಅಲ್ಲೇ ತಿಮ್ಮಪ್ಪಯ್ಯನವರ ಮನೆತನದ ಮನೆ. ಸುತ್ತ ಎತ್ತರವಾದ ಪದವು ಸ್ಥಳಗಳು. ನಡುವೆ ಕಣಿವೆಯಂತಹ ಅಗಲ ಕಿರಿದಾದ ಬಯಲುಗಳು. ಈ ಪ್ರದೇಶದ ಕುರಿತು ಮುಳಿಯರೇ ತಮ್ಮ 'ಪಶ್ಚಾತ್ತಾಪ' ಕಾದಂಬರಿಯಲ್ಲಿ ಹೇಳಿದ್ದಾರೆ: "ಮೇಲು ನಾಡಿನ ಬಯಲಲ್ಲೇ ಪಳಗಿದ ಕಣ್ಣಿಗೆ ಈ ಕೆಳನಾಡಿನ ನೋಟವು. ಮೊದಮೊದಲು ಕುತೂಹಲದಾಯಕವಾಗಬಹುದು: ಕಡೆಕಡೆಗೆ ಬೇಸರಿಕೆಯನ್ನೊದಗಿಸಬಹುದು. ನೋಟವು ಒಂದಂತಿಲ್ಲ ವಿನ್ನೊಂದು; ಅದರಿಂದ ಕುತೂಹಲ. ಹತ್ತಬೇಕು. ಇಳಿಯಬೇಕು; ನಿಲುಕಬೇಕು; ನುಸುಳಬೇಕು; ಅದರಿಂದ ಬೇಸರ. ಮೊತ್ತಮೊದಲೊಮ್ಮೆ ಕಡಲಿನ ಬಿಡಾರವಾಗಿತ್ತಂತೆ ಈ ನಾಡು. ವಜ್ರಾಘಾತಕ್ಕೆ ಹೆದರಿ ಪರ್ವತಗಳ ಪಿಳ್ಳೆ ಮರಿಗಳೆಲ್ಲ ಈ ಕಡಲಿನಲ್ಲಿಡೆಗೊಂಡುವು: ಮಲಯಾಚಲದ ಸಾಲೊಂದು ಪೂರ್ವದಿಕ್ಕಿನಲ್ಲಿ ರಕ್ಷಣೆಯ ಆಳ್ವೇಲಿಯಾಗಿ ನಿಂತು. ಇಂದ್ರಾಯುಧದಿಂದ ರೆಕ್ಕೆಯುಳಿದು ಅಲ್ಲಿ ಸ್ತಬ್ಧವಾಯಿತು. ಆ ಮೇಲೆ ಪರಶುರಾಮ

ನಿಂದ ಕಡಲು ಹಿಂಜರಿದಾಗ ಈ ಕ್ಷೇತ್ರದಲ್ಲಿ ದಟ್ಟವಾಗಿ ನೆಲೆಗೊಂಡ ಗಟ್ಟಗುಡ್ಡಗಳು, ಕುದುರು ದಿಣ್ಣೆಗಳು ಎಂದರೆ ಅಂದು ಒಳಹೊಕ್ಕ ಮಲಯಾಚಲದ ಪಿಳ್ಳೆಗಳೇ. ಬಹುಕಾಲದ ಜಲವಾಸದಿಂದ ಚಳಿಹಿಡಿದು ರೆಕ್ಕೆಗಳಿದ್ದರೂ ಸ್ತಬ್ಧವಾಗಿವೆ, ಎನ್ನಬಹುದು ಪೌರಾಣಿಕರು." ಇಂತಹ ಕುದುರು ದಿಣ್ಣೆಗಳ ಎಡೆಯ ಕಿರು ಬಯಲಲ್ಲಿ ಕಂಗು ತೆಂಗುಗಳ ನಡುವೆ ನೆಲೆಗೊಂಡಿದೆ ಮುಳಿಯ. ಹತ್ತಿರದಲ್ಲಿ "ಆನೆಕಲ್ಲಿನಿಂದ ಏನೆಕಲ್ಲ ಮಲೆವರೆಗೆ" ಹಬ್ಬಿ ಮೇಲೇರಿ ನಿಂತಿರುವ ಕಳಂಜಿ ಮಲೆ. ಈ ಮಲೆಯ ಭೀಮ ಸಾನ್ನಿಧ್ಯದಲ್ಲಿ ಮುಳಿಯದವರೂ ಭೀಮ ವ್ಯಕ್ತಿತ್ವದಿಂದ ಮೆರೆದವರು. ಆ ಪ್ರದೇಶದಲ್ಲೆಲ್ಲ ಅವರದು ದಾನದಲ್ಲಿ, ದರ್ಪದಲ್ಲಿ ಹೆಸರಾದ ಮನೆತನ. ಹತ್ತಿರದಲ್ಲೇ ವಿಟ್ಲ ಸೀಮೆಯ ಅರಸರ ಅರಮನೆ. ಸೀಮೆಯಲ್ಲೆಲ್ಲ ಅವರದೇ ಕಾರುಭಾರ. ಸಂಪತ್ತು, ಶಕ್ತಿ, ಅಧಿಕಾರ, ಬಲ, ಬೆಂಬಲ–ಎಲ್ಲ ಅವರಿಗೇ. ಆದರೆ ಅವರಿಗೂ ಬಾಗದವರು ಮುಳಿಯದವರು. 'ತಾಗಿ'ದವರು ಅವರು. ಸೀಮೆಯ ಅರಸರ ಎದುರು "ಮುಳಿಯದ ಅರಸರು" ಎಂದು ಹೆಸರಾಂತವರು. ಆದರೆ ಈ ಕೆಚ್ಚಿಗೆ ಅವರು ತೆತ್ತ ಬೆಲೆ ಅಲ್ಪವಲ್ಲ. ಕೈಮೀರಿ ಖರ್ಚು ಮಾಡಬೇಕಾಯಿತು. ಸಾಲ ಹುಟ್ಟಿತು. ಬೆಳೆಯ ಹತ್ತಿತು. ಇಂತಹ ಹೊತ್ತಿನಲ್ಲೇ ಆ ಮನೆತನದಲ್ಲಿ ಕೇಶವ ಭಟ್ಟ ಮತ್ತು ಕೃಷ್ಣ ಭಟ್ಟ ಎಂಬಿಬ್ಬರು ಸಹೋದರರು ಇದ್ದರು. ಇವರಲ್ಲಿ ಹಿರಿಯವರಾದ ಕೇಶವ ಭಟ್ಟರೇ ತಿಮ್ಮಪ್ಪಯ್ಯನವರ ತೀರ್ಥರೂಪರು.

ಕೇಶವ ಭಟ್ಟರನ್ನು ಊರಲ್ಲಿ ಅಣ್ಣಯ್ಯನೆಂದೆ ಕರೆಯುತ್ತಿದ್ದರು. ಹಳೆಯ ದಾಖಲೆ ಪತ್ರಗಳಲ್ಲಿ ಅವರ ಹೆಸರು ಅಣ್ಣಯ್ಯ ಯಾನೇ ಕೇಶವ ಭಟ್ಟ ಎಂದೇ ನಮೂದಿತವಾಗಿದೆ. ಇವರದು ಭಾರದ್ವಾಜ ಗೋತ್ರ.

ಕೇಶವ ಭಟ್ಟರು ಸದಾಚಾರ ನಿಷ್ಠರು, ಶಾಸ್ತ್ರವೇತ್ತರು.

ವಿಚಾರ ಶಾಲಿಗಳು. ಆದರೆ ಮನೆತನದ ದರ್ಪ ಅವರಲ್ಲೂ ರಕ್ತಗತ ವಾಗಿತ್ತು. ಅವರಿಗೆ ಕಡೆಂಗೋಡ್ಲು ಮನೆತನದ ಮೂಕಾಂಬಿಕಾ ಎಂಬ ಹೆಣ್ಣು ಮಡದಿಯಾಗಿ ಬಂದರು. ಮೂಕಾಂಬಿಕೆ ಪ್ರಸಿದ್ಧ ಕನ್ನಡ ಸಾಹಿತಿ ಕಡೆಂಗೋಡ್ಲು ಶಂಕರ ಭಟ್ಟರ ಸೋದರತ್ತೆ. ಈ ಹೆಣ್ಣು ದೈವನಿಷ್ಠೆ. ಈಕೆಯದು 'ಪಡಿಗಾಣದಿಂಚರದ ಗಮಕ ದೊಡ್ಡವಣೆಯಿಂ' ರಾಮಾಯಣ ಭಾರತಾದಿ ಕಾವ್ಯಗಳನ್ನು ಓದುವ ಬಲುಮೆ. ಈಕೆ ಪತಿಪರಾಯಣೆ. ಈ ದಂಪತಿಗಳಿಗೆ ಸರ್ವಜಿನ್ನಾಮ ಸಂವತ್ಸರದ ಕುಂಭಮಾಸ ಶಿಶಿನೆಯ ಫಾಲ್ಗುಣ ಮಾಸದ ಇಪ್ಪತ್ತೆರಡನೆಯ ದಿನ ಫಾಲ್ಗುಣ ಬಹುಳ ಆರರಂದು ಶನಿವಾರ ಹತ್ತುವರೆ ಗಳಿಗೆಗೆ (ಕ್ರಿ.ಶ. ೧೮೮೮ನೆಯ ಮಾರ್ಚಿ ತಿಂಗಳ ಮೂರರಂದು ಪೂರ್ವಾಹ್ನ ಹನ್ನೊಂದು ತಾಸಿಗೆ) ಮೊದಲ ಗಂಡು ಮಗುವಿನ ಜನನವಾಯಿತು. ಈ ಮಗುವೇ ಮುಂದೆ ಕನ್ನಡ ಸಾಹಿತ್ಯ ಲೋಕದಲ್ಲಿ ಪ್ರಸಿದ್ಧರಾದ ಪಂಡಿತ ಮುಳಿಯ ತಿಮ್ಮಪ್ಪಯ್ಯನವರು. ಯೋಗಾಯೋಗದಿಂದ ಇವರೂ ಲಕ್ಷ್ಮೀಶನಂತೆ 'ಭಾರದ್ವಾಜ ಗೋತ್ರಭವನಣ್ಣಮಾಂಕನ ಸುತ'ರಾಗಿದ್ದಾರೆ!

ತಿಮ್ಮಪ್ಪಯ್ಯನವರು ಹುಟ್ಟುವಾಗ ಮನೆತನದ ಮರ್ಯಾದೆ ಹಾಗೆಯೇ ಇತ್ತು. ಆದರೆ ಸಾಲದ ಹೊರೆ ಮಾತ್ರ ಮಿತಿ ಮೀರಿತ್ತು. ಯಾರಿಗೂ ಬಾಗದ ಚಿತ್ತವೃತ್ತಿ ಇನ್ನೂ ನೆಟ್ಟನೆ ನಿಂತಿತ್ತು. ಸಾಲದ ಶೂಲ ನಾಲ್ದೆಸೆಯಿಂದ ಅದನ್ನು ತಿವಿಯು ತ್ತಿತ್ತು. ಹೀಗಿದ್ದೂ ಮುಳಿಯದವರು ಬೆಳೆಸಿರುವ ಅಡಿಕೆ ಮರ ಗಳಂತೆ ಕುದುರು ದಿನ್ನೆ. ಬೆಟ್ಟ ಮಲೆಗಳ ಎತ್ತರಕ್ಕೆ ಅಂಜದೆ ತಲೆಯೆತ್ತಿ ನಿಲ್ಲುವ ಗುಣವೂ. ತುಂಡಾದೇನೇ ಹೊರತು ಬಾಗ ಲಾರೆ ಎನ್ನುವ ಛಲವೂ ರಕ್ತಗತವಾಗಿತ್ತು ಅಲ್ಲಿ.

ತಿಮ್ಮಪ್ಪಯ್ಯನವರ ಪ್ರಾಥಮಿಕ ಶಿಕ್ಷಣ ಹಳ್ಳಿಯಲ್ಲೇ ನಡೆಯಿತು. ವಾಮನ ಮಾಸ್ತರರೆಂಬವರು ಗುರುಗಳಾಗಿದ್ದರು. ಆಗ ಪರೀಕ್ಷೆಗೆ ವಿಟ್ಲ ಪೇಟೆಗೆ ಹೋಗಬೇಕಾಗಿತ್ತು. ವಿಟ್ಲದಲ್ಲಿ

ಅವರ ನಾಲ್ಕನೆಯ ತರಗತಿಯನ್ನು ಪಾಸು ಮಾಡಿದರು. ಅವರ ಶಾಲೆಯ ಕಲಿಕೆ ಅಷ್ಟರಲ್ಲಿ ಕೊನೆಯಾಯಿತು. ಅದರಿಂದ ಮುಂದೆ ಹೋಗಲು ಮನೆತನದ ಆರ್ಥಿಕ ಸ್ಥಿತಿ ಅವಕಾಶಕೊಡಲಿಲ್ಲ. ಈ ಶಾಲಾ ವ್ಯಾಸಂಗದ ಜೊತೆಗೇ ಅವರು ಖಾಸಗಿಯಾಗಿ ಸಂಸ್ಕೃತ ಅಭ್ಯಾಸವನ್ನು ಮಾಡುತ್ತಿದ್ದರು. ಆಗ ಆ ಸೀಮೆಯಲ್ಲೆಲ್ಲ ಪ್ರಸಿದ್ಧ ಸಂಸ್ಕೃತ ವಿದ್ವಾಂಸರಾಗಿದ್ದ ಕಲ್ಲಜೆ ಕೃಷ್ಣ ಶಾಸ್ತ್ರಿಗಳು ಮುಳಿಯರಿಗೆ ಸಂಸ್ಕೃತ ಗುರುಗಳಾಗಿ ದೊರೆತುದು ಅವರ ಭಾಗ್ಯ.

ಹುಡುಗನಲ್ಲಿ ಜ್ಞಾನಪಿಪಾಸೆಯಿತ್ತು. ಬೆರಳು ತೋರಿಸಿದರೆ ಕೈ ನುಂಗುವ ಜಾಣ್ಮೆಯಿತ್ತು. ಗುರುಗಳ ಮಾರ್ಗದರ್ಶನ, ಸ್ವಯಂ ಅಭ್ಯಾಸ ಇವುಗಳಿಂದ ಹುಡುಗನ ಕನ್ನಡ ಸಂಸ್ಕೃತಗಳ ಅಭ್ಯಾಸ ಸಾಗುತ್ತಿರುವಂತೆಯೆ ಮನೆಯ ಆರ್ಥಿಕ ಸ್ಥಿತಿ ಕುಸಿಯ ತೊಡಗಿತು. ಹುಡುಗನಿಗೆ ಹೆಚ್ಚಿನ ಅಭ್ಯಾಸ ಮಾಡಿಸುವ ಮಾತು ಬಿಡಿ. ಉದರ ನಿರ್ವಹಣೆಯದೇ ಸಮಸ್ಯೆಯಾಗ ತೊಡಗಿತು. ಸಾಲಿಗರು ನೂರು ಕಡೆಯಿಂದ ಎಳೆದು ತಿನ್ನುತ್ತಿದ್ದರು.

ಸಾಲಗಾರರ ಬಾಯಿಯಿಂದ ಕೊನೆಗೂ ಪಾರಾಗಲಾಗಲಿಲ್ಲ. ಒಂದು ದಿನ ಸಾಲಗಾರರು ಬಂದು ಆಸ್ತಿಯನ್ನೆಲ್ಲಾ ಸ್ವಾಧೀನ ಪಡಿಸಿಕೊಂಡರು. ಸಾಲ ಅಷ್ಟರಲ್ಲೇ ತೀರಲಿಲ್ಲ. ಮನೆಯೊಳಗಿನ ಎಲ್ಲಾ ಸಾಮಾನುಗಳನ್ನೂ ಸ್ವಾಧೀನಪಡಿಸಿಕೊಂಡರು. ಈ ದುರಂತ ನಡೆಯುವ ಹೊತ್ತಿಗೆ ಯಜಮಾನ ಕೇಶವ ಭಟ್ಟರು ಹಾಸಿಗೆ ಹಿಡಿದು ಮಂಚದ ಮೇಲೆ ಮಲಗಿದ್ದರು. ಸಾಲಗಾರರ ಕಣ್ಣು ಆ ಮಂಚದ ಮೇಲೆ ಬಿತ್ತು. ಅವರು ರೋಗಿ ಕೇಶವ ಭಟ್ಟರನ್ನು ನೆಲದಲ್ಲಿ ಮಲಗಿಸಿ ಮಂಚವನ್ನೂ ಎತ್ತಿಕೊಂಡರು! ಮುಳಿಯದ ಮನೆ ಕಣ್ಣೀರು ಕರೆಯುತ್ತಿತ್ತು. ಒಳಗೆ ಒಲೆಯಲ್ಲಿ ತಾಮ್ರದ ಚೆರಿಗೆಯಲ್ಲಿ ಅನ್ನ ಬೇಯುತ್ತಿತ್ತು. ಸಾಲ ವಸೂಲಿಗೆ ಬಂದವರು ಒಲೆಯಿಂದ ಚೆರಿಗೆಯನ್ನೆತ್ತಿ ಅರೆ ಬೆಂದಿದ್ದ ಅನ್ನವನ್ನು ಅಂಗಳಕ್ಕೆ ಎಸೆದು, ಪಾತ್ರೆಯನ್ನೆತ್ತಿಕೊಂಡು ನಡೆದರು! ಒಮ್ಮೆ

ದಾನಕ್ಕಾಗಿ, ಧರ್ಮಕ್ಕಾಗಿ ಕೊಪ್ಪರಿಗೆ ಇಟ್ಟಿದ್ದ ಮುಳಿಯದ ಮನೆತನಕ್ಕೆ ತನಗೆ ಉಣ್ಣಲು ಇಟ್ಟ ಅನ್ನವನ್ನೂ ಉಳಿಸಿಕೊಳ್ಳಲಾಗಲಿಲ್ಲ. 'ಕಿಬ್ಬದಿಯ ಕೀಲು ಮುರಿದಂತೆ' ಮುಳಿಯ ಮನೆತನದ ಮರ್ಯಾದೆ ಕುಸಿದು ಬಿತ್ತು. ಒಮ್ಮೆ ರಾಜರಾಗಿ ಮೆರೆದವರು ಆ ಮನೆಯಿಂದ ಇಂದು ಭಿಕಾರಿಗಳಾಗಿ ಹೊರಬಿದ್ದರು! ಒಮ್ಮೆ ನೂರಾರು ಜನರಿಗೆ ಆಶ್ರಯ ನೀಡಿದ್ದ ಮನೆತನ ಇಂದು ನಿರಾಶ್ರಿತವಾಗಿ ಆಶ್ರಯ ಹುಡುಕುತ್ತ ನಡೆಯಿತು! ಬಳಸಿ ಬಂದಿದ್ದ ವಸ್ತುವಡವೆ, ಬಾಳಿ ಬಂದಿದ್ದ ಮನೆಮಠ, ಅನುಭವಿಸಿ ಬಂದಿದ್ದ ಭೂಮಿಕಾಣಿ ಎಲ್ಲ ಪರಾಧೀನವಾಗಿ ಪರದೇಶಿಗಳಾಗಿ ಹೊರಟರು ಮುಳಿಯದವರು. ಮನೆ! ಆ "ಮನೆಯೆಂದರೆ ಬರಿಯ ಮನೆ ಮಾತ್ರವಲ್ಲ; ನಾಲ್ಕೈದು ತಲೆವಿಡಿದು ಬಂದ ಮುಳಿಯದ ಸಂಸಾರದ ಜೀವಕ್ಕೆ ಮೈಯಾಗಿತ್ತು ಆ ಮನೆ." ಈಗ ಆ ಮೈಯೆ ಬಿದ್ದು ಹೋಯಿತು. ಶತಮಾನ ಶತಮಾನಗಳಿಂದ ಬೆಳಸಿ ನಿಲ್ಲಿಸಿದ ಮನೆತನವ ಮಾನಮರ್ಯಾದೆ ಮಣ್ಣುಪಾಲಾಯಿತು. ಎಳೆಯ ಮುಳಿಯ ಇದನ್ನು ನೋಡಿದರು. ಅನುಭವಿಸಿದರು. ಹೃದಯದ ನೆಲದಲ್ಲಿ ಅಚ್ಚು ಮೂಡಿಸಿಕೊಂಡರು. ಕೊನೆಗೆ "ಪಶ್ಚಾತ್ತಾಪ" ಕಾದಂಬರಿಯ ಮೂಲಕ ಎರಕ ಹೊಯ್ದರು.

ಮುಳಿಯದವರು ಬಂಧುಗಳ ಮನೆಯಲ್ಲಿ ಆಶ್ರಯ ಪಡೆದು ನಿಂತರು. 'ಗುಡ್ಡೆತೋಟ' ಎಂಬಲ್ಲಿ ಸ್ವಲ್ಪ ಸಮಯ ವಾಸಿಸಿದಾಗ ಅಲ್ಲಿಗೂ ಸಾಲಿಗರ ಧಾಳಿ ನಡೆಯಿತು. ಅಲ್ಲಿಂದ ಅವರು ಹತ್ತಿರದಲ್ಲೇ ಇದ್ದ ಪೆರುವಾಯಿ ಗ್ರಾಮದ 'ಕುಂಬಳ ಕೋಡಿ' ಎಂಬ ಸ್ಥಳಕ್ಕೆ ಹೋಗಿ ವಾಸಿಸತೊಡಗಿದರು.

ಕೇಶವ ಭಟ್ಟರು ದೈಹಿಕವಾಗಿ ಕುಸಿದಿದ್ದರು. ಆರ್ಥಿಕವಾಗಿ ಸೋತಿದ್ದರು. ಸಂಸಾರ ಬೆಳೆದಿತ್ತು. ತಿಮ್ಮಪ್ಪಯ್ಯನವರಲ್ಲದೆ ಶಂಕರ ಭಟ್ಟರು, ನಾರಾಯಣ ಭಟ್ಟರು, ಶ್ಯಾಮ ಭಟ್ಟರೆಂಬ

ಮೂವರು ಗಂಡು ಮಕ್ಕಳೂ ಒಬ್ಬ ಹೆಣ್ಣು ಮಗಳೂ ಇದ್ದರು. ಇವರನ್ನೆಲ್ಲಾ ಸಾಕಿ ಸಲಹುವುದೇ ದೊಡ್ಡ ಸಮಸ್ಯೆಯಾಗಿತ್ತು. ಹಿರಿಯ ಮಗನಾದ ತಿಮ್ಮಪ್ಪಯ್ಯನವರ ಬುದ್ಧಿ ಬಲಿತಿತ್ತು. ಅವರಿಗೆ ಒಂದೆಡೆಯಿಂದ ಜ್ಞಾನದಾಹ, ಮತ್ತೊಂದೆಡೆಯಿಂದ ಸಾಂಸಾರಿಕ ದುಃಖ. ಇವೆರಡರ ತುಮುಲದಿಂದ ಅವರು ಒಂದು ದಿನ ಯಾರಿಗೂ ಹೇಳದೆ ಕೇಳದೆ ಊರು ಬಿಟ್ಟು ಹೊರಟರು. ಕ್ರಿ.ಶ. 1906ರ ಹೊತ್ತಿಗೆ ಒಂದು ದಿನ ಈ ತುಮುಲಾಂತಃಕರಣಿ ತರುಣ ವಿದ್ಯೆಯ ಹಲವು ಮುಖಗಳ ದರ್ಶನಕ್ಕಾಗಿ ಮನೆಯನ್ನು ತೊರೆದ. ಜೊತೆಗೆ ನಿಲ್ಲಲು ಆಸರೆ, ಉಣ್ಣಲು ಆಹಾರ, ಇವನ್ನು ಆರ್ಜಿಸಿಕೊಳ್ಳುವ ಛಲ. ಮತ್ತೆ ಮನೆಯವರಿಗೆ ನೆರವಾಗುವ ಹಂಬಲ. ಮುಳಿಯರು ಹಿಂದು ಮುಂದು ನೋಡದೆ ನಡೆದರು.

ಮನೆಯನ್ನೇನೊ ಬಿಟ್ಟುದಾಯಿತು. ಆದರೆ ಎಲ್ಲಿ ಹೋಗಲಿ? ಹೇಗೆ ಜೀವಿಸಲಿ? ವಿದ್ಯೆಯನ್ನು ಎಂತು ಆರ್ಜಿಸಲಿ? ಹಣವನ್ನು ಹೇಗೆ ಸಂಪಾದಿಸಲಿ? ಈ ಯೋಚನೆಗಳ ಕೋಲಾಹಲ ಮನಸ್ಸಿನಲ್ಲಿ ನಡೆಯುತ್ತಿರುವಂತೆಯೇ ಅವರು ತಿರುವನಂತಪುರವನ್ನು ಸೇರಿದರು. ಆ ಕಾಲದಲ್ಲಿ ಮಂತ್ರ, ತಂತ್ರ, ವಿದ್ಯೆ, ವೈದ್ಯ, ಸಂಗೀತ, ಕಲೆಗಳಿಗೆ ಕೇರಳ ದಕ್ಷಿಣ ಕನ್ನಡದ ಕಡೆ ಪ್ರಸಿದ್ಧವಾಗಿತ್ತು. ಆ ದಿನಗಳಲ್ಲಿ ಬಹಳ ಜನ ವೈದ್ಯರು, ಜ್ಯೋತಿಷ್ಕರು, ಮಂತ್ರವಾದಿಗಳು, ಕೇರಳದಿಂದ ದಕ್ಷಿಣ ಕನ್ನಡದ ಕಡೆ ಬರುತ್ತಿದ್ದರು. ಎಷ್ಟೋ ಜನ ಸಂಗೀತ ವಿದ್ವಾಂಸರು ಕೇರಳದ ಕಡೆಯಿಂದ ಬಂದು ಈ ಕಡೆಯಲ್ಲಿ ವಿದ್ಯಾಭ್ಯಾಸ ಮಾಡಿಸುತ್ತಿದ್ದರು. ಇದನ್ನು ತಿಳಿದಿದ್ದ ಮುಳಿಯರು ತಿರುವಾಂಕೂರಿಗೆ ಬಂದರು. ಈ ಪಯಣದಲ್ಲಿ ಹೆಚ್ಚಿನ ಭಾಗವನ್ನು ಅವರು ನಡೆದೇ ಮುಗಿಸಿದರಂತೆ.

ತಿರುವನಂತಪುರ! ಹೊಸ ರಾಜ್ಯ. ಅಪರಿಚಿತ ಜನ. ಅರಿಯದ ಪರಿಸರ. ತಿಳಿಯದ ಭಾಷೆ. ಮುಳಿಯರಲ್ಲಿ ಕಲಿಯುವ ಹುಚ್ಚು ನೆತ್ತಿಗೇರಿದೆ. ಅಲ್ಲಿ ಸಂಸ್ಕೃತ ಕಲಿಸಲೆಂದೇ ರೂಪುಗೊಂಡ

ಮಹಾರಾಜಾ ಸಂಸ್ಕೃತ ಕಾಲೇಜು ಇದೆ. ಉಡಲು ಒಂದೇ ಬಟ್ಟೆಯಿರುವ, ಮಲಗಲು ಮನೆಯಿಲ್ಲದ, ಉಣ್ಣಲು ಅಲ್ಲಿ ಇಲ್ಲಿ ಅಲೆಯಬೇಕಾಗಿರುವ, ಬರಿದಾದ ಜೇಬಿನ, ಗುರುತು ಪರಿಚಯ ವಿಲ್ಲದ ಈ ಹುಡುಗನಿಗೆ ಅಲ್ಲಿ ಪ್ರವೇಶ ಹೇಗೆ ಸಾಧ್ಯ! ಮುಳಿಯರು ಧೃತಿಗೆಡಲಿಲ್ಲ. ಮಹಾರಾಜರ ಧರ್ಮಛತ್ರದಲ್ಲಿ ಉಂಡರು. ಕೋಟೆಯ ಹೊರಗಿರುವ 'ಪಾಲ್‌ಕೊಳಂಗರೆ' ಯಲ್ಲಿರುವ ಬ್ರಾಹ್ಮಣರ ಜಗಲಿಗಳಲ್ಲಿ ಮಲಗಿದರು. ಯಾವಾಗಲಾದರೊಮ್ಮೆ ಯಾರಾದರೂ ನಾಲ್ಕು ಕಾಸು ದಕ್ಷಿಣೆ ಕೊಡುತ್ತಿದ್ದರು ಈ ಬ್ರಾಹ್ಮಣನಿಗೆ! ಅದರಿಂದ ಉಳಿದ ಆವಶ್ಯಕತೆಗಳ ಪೂರೈಕೆ! ಮಹಾರಾಜಾ ಸಂಸ್ಕೃತ ಕಾಲೇಜಿನ ಮೇಲಿನ ವರ್ಗಗಳಲ್ಲಿ ಕಲಿಯುವ ಸಹೃದಯ ವಿದ್ಯಾರ್ಥಿಗಳ ಉದಾರತೆಯನ್ನು ಆಶ್ರಯಿಸಿ ಸಂಸ್ಕೃತದ ಕಲಿಕೆ. ಜೊತೆಗೆ ಅವರಿವರ ಪಾದಮೂಲದಲ್ಲಿ ಕುಳಿತು ಸ್ವಲ್ಪ ಸಂಗೀತಾಭ್ಯಾಸ. ಹೀಗೆ ಕಳೆದುವು ದಿನಗಳು.

ದಿನಗಳೆದಂತೆ ಇದು ಸಾಲದು ಎನಿಸಿತು ಮುಳಿಯರಿಗೆ. ಇದಕ್ಕಿಂತ ಹೆಚ್ಚು ಇಲ್ಲಿ ಆಗದು ಎಂಬುದೂ ಅನಿಸಿತು. ಒಳಗಿನ ತುಡಿತಕ್ಕೆ ತುದಿಮೊದಲಿರಲಿಲ್ಲ. ಮತ್ತೆ? ಹಿಂದೆ ಕೇಳಿದ್ದರು ಮೈಸೂರ ಹೆಸರು. ಅದರ ವೈಭವ. ದಸರದ ವಿಭವ. ಸಂಗೀತದ ಆಶ್ರಯ. ಲಲಿತ ಕಲೆಗಳ ಪ್ರೋತ್ಸಾಹ. ಮುಳಿಯರ ಕಾಲು ಮೈಸೂರಿನ ದಿಕ್ಕು ಹಿಡಿಯಿತು. ಮೈಸೂರು ಸೇರಿದರು. ಆದರೆ ಮೈಸೂರೂ ಅವರ ಪಾಲಿಗೆ ಸುಖ, ಶಾಂತಿಗಳನ್ನು ತರಲಿಲ್ಲ. ಹೋರಾಟದ ಕಳವಷ್ಟೆ ಆಯಿತು. ಆದರೂ ಎದೆಗೆಡಲಿಲ್ಲ ಹುಡುಗ. ಹೋರಾಡುತ್ತ ದಿನಗಳೆದ. ಊಟಕ್ಕೆ ವಾರಾನ್ನ. ಉಳಿಕೊಳ್ಳಲು ಎಲ್ಲಿಂದರಲ್ಲಿ. ಉಡಲು ಒಂದು ವಸ್ತ್ರ. ಅದೇ ವಸ್ತ್ರದ ಇನ್ನೊಂದು ತುದಿ ಮೈಯ ಮರೆ ಕೂಡಾ! ಹೀಗೆ ಕಳೆಯಿತು ದಿನಗಳು. ಇಂತಹ ಸ್ಥಿತಿಯಲ್ಲೂ, 'ಸಂಗೀತ ಕಳಾನಿಧಿ' ಗಳೆಂದು ಪ್ರಸಿದ್ಧರಾಗಿದ್ದ ವಾಸುದೇವಾಚಾರ್ಯರ ಬಳಿ

ಶಾಸ್ತ್ರೀಯ ಸಂಗೀತದ ಅಭ್ಯಾಸ ನಡೆಸಿದರು ಮುಳಿಯರು! 'ಮಧುರವಾದ ಶಾರೀರವಿದ್ದರೂ ಸಂಗೀತ ವ್ಯಾಸಂಗವನ್ನು ಬಹಳ ಕಾಲ ಮುಂದುವರಿಸುವುದು ಅವರಿಗೆ ಶಕ್ಯವಾಗದೆ ಹೋಯಿತು' ಅನ್ಯ ಒತ್ತಡಗಳಿಂದ.

ಇಷ್ಟು ಹೊತ್ತಿಗಾಗಲೇ ಮುಳಿಯರು ದೇಶ ತ್ಯಾಗ ಮಾಡಿ ನಾಲ್ಕು ಸಂವತ್ಸರಗಳಾಗಿದ್ದವು! ಮನೆಯ ಮೋಹ ಮತ್ತೆ ಮೊಳೆತು ಬೆಳೆದಿತ್ತು. 1910ಕ್ಕೆ ಅವರು ಮೈಸೂರನ್ನು ಬಿಟ್ಟು ಊರಿಗೆ ಹಿಂದಿರುಗಿದರು. ಆಗಿನ್ನೂ ಮುಳಿಯರು ಇಪ್ಪತ್ತೆರಡರ ತರುಣ. ಆ ತಾರುಣ್ಯ ಸಹಜವಾದ ಶಕ್ತಿ, ಸಾಹಸಗಳ ಪ್ರದರ್ಶನಕ್ಕೆ ಊರಿನಲ್ಲಿ ಅವಕಾಶವೇ ಇರಲಿಲ್ಲ. ಊರು ಸೇರಿ ಕುಂಬಳಕೋಡಿ ಯಲ್ಲಿದ್ದೂ ಅವರೂ 'ಕೋಡಿಸೇರ'ಲಿಲ್ಲ. ಅವರ ಸುಪ್ತ ಶಕ್ತಿಯ ಪ್ರದರ್ಶನಕ್ಕೆ ಹೊಸ ಅವಕಾಶಗಳನ್ನು ಸೃಷ್ಟಿಸಿಕೊಂಡರು.

ಆ ಕಾಲಕ್ಕೆ ದಕ್ಷಿಣ ಕನ್ನಡದ ಹಳ್ಳಿ ಹಳ್ಳಿಗಳಲ್ಲೂ ಭಾರತ, ರಾಮಾಯಣ, ಭಾಗವತ, ಜೈಮಿನಿ ಭಾರತಾದಿ ಪುರಾಣ ಗ್ರಂಥ ಗಳ ವಾಚನ ಸಾಮಾನ್ಯವಾಗಿತ್ತು. ಈ ಕಾವ್ಯಗಳ ವಾಚನ ಮಾಡಿ ಜನಸಾಮಾನ್ಯರಿಗೆ ಅರ್ಥ ವಿವರಿಸಿ ಹೇಳುವ ಸಂಪ್ರ ದಾಯವಿತ್ತು. ಸಿರಿವಂತರ ಮನೆಗಳಲ್ಲಿ, ದೇವಸ್ಥಾನಗಳಲ್ಲಿ ಮಳೆಗಾಲವಿಡೀ ಹೀಗೆ ಪುರಾಣವಾಚನ ಮಾಡಿಸಿ ಕೊನೆಗೆ ಮಂಗಳ ದೊಡನೆ ಸಂತರ್ಪಣಾದಿಗಳು ನಡೆಯುತ್ತಿದ್ದುವು. ಅಲ್ಲದೆ ಅಲ್ಲಲ್ಲಿ ತಾಳಮದ್ದಲೆ ಕೂಟಗಳಿದ್ದು ಅಲ್ಲಿ ಆ ಪ್ರದೇಶದ ಎಲ್ಲರೂ ಸೇರಿ ತಿಳಿದವರು ಅರ್ಥ ಹೇಳುವ, ತಿಳಿಯದವರು ಅರ್ಥ ಕಲಿಯುವ, ಉಳಿದವರು ಕೇಳಿ ಸುಖಿಸುವ ಕ್ರಮವಿತ್ತು. ಈ ಭಾಗದ ಜನ 'ಕುಜಿತೋದದೆಯುಂ ಕಾವ್ಯ ಪ್ರಯೋಗಪರಿಣತಮತಿಗಳಾ'ಗಲು ಈ ತಾಳಮದ್ದಲೆ ಕೂಟಗಳೂ ಕಾರಣವಾಗಿದ್ದುವು. ಯಕ್ಷಗಾನ ಬಯಲಾಟವಂತೂ ಈ ಜಿಲ್ಲೆಯ ಜನರನ್ನು 'ಸುಸಂಸ್ಕೃತ'ರನ್ನಾಗಿ ಮಾಡುವುದರಲ್ಲಿ ತಳೆದ ಪಾತ್ರ ಬಹಳ ದೊಡ್ಡದು. ಬಯಲಾಟದ

ಹಾಡುಗಾರಿಕೆ, ಅರ್ಥಗಾರಿಕೆ, ಬಣ್ಣಬಳಿಯುಪಿಕೆ. ವೇಷಧಾರಣೆ. ಕುಣಿತ—ಇವೆಲ್ಲವೂ ಈ ಭಾಗದ ಅವಿದ್ಯಾವಂತ, ಗ್ರಾಮೀಣ ಜನರನ್ನೂ ಸಾಹಿತ್ಯ ಕಲೆಗಳಲ್ಲಿ ಆಸಕ್ತರನ್ನಾಗಿ ಮಾಡುವಷ್ಟು ಶಕ್ತಿಶಾಲಿಯಾಗಿದ್ದುವು. ಮನೆಯೊಳಗೆ ಸುಖ, ಶಾಂತಿ ಕಾಣದ ಮುಳಿಯರು ಈ ಕಲೆಗಳೆಡೆಗೆ ಆಕರ್ಷಿತರಾದರು. ಅಲ್ಲದೆ 'ನವನೀತ ರಾಮಾಯಣ'ದಲ್ಲಿ ಮುಳಿಯರೇ ಹೇಳಿಕೊಂಡಂತೆ,

"ಹೊಸತಾಗಿ ಮಸೆದ ಬಡತನದುಪಟಳಕ್ಕಳುಕಿ
ಪಡಲಾರದಾ ಪಾಡುವಟ್ಟರೂ ಕಂಗೆಡದೆ
ನಡೆದೆನ್ನ ಪಡೆದಮ್ಮ ಧರ್ಮದೇವತೆಯೆ ಮನೆ
ಯಂ ಮಕ್ಕಳಂ ಬಾಳ್ಕೆಯನ್ನಿಂತುಟರಳಿಸಿದೆ.
ಪಡಿಗಾಣದಿಂಚರದ ಗಮಕದೊಡ್ಡವಣೆಯಿಂ
ಪಾಡಿ ರಾಮಾಯಣವನೂಡಿದೆ ಮಗಂಗೆ....."

ತಾಯಿ ಮೂಕಾಂಬಿಕೆ ಸಣ್ಣ ಪ್ರಾಯದಲ್ಲೇ ಪುರಾಣದ ಕಥೆಯ. ಕಾವ್ಯಗಳ ಹಾಡುಗಾರಿಕೆಯ ಅಭಿರುಚಿಯನ್ನು ಮುಳಿಯರಲ್ಲಿ ಬಿತ್ತಿ ಬೆಳಸಿದ್ದಳು. ಈ ಎಲ್ಲ ಹಿನ್ನೆಲೆಗಳಿಂದ ಅವರು ಯಕ್ಷ ಗಾನದ ಹಾಡುಗಾರಿಕೆಯನ್ನು ಕಲಿತುಕೊಂಡರು. 'ತಾಳಮದ್ದಳೆ' ಯಲ್ಲಿ ಅರ್ಥ ಹೇಳುವುದನ್ನೂ ಅಭ್ಯಾಸ ಮಾಡಿಕೊಂಡರು. ಗಮಕ ರೀತ್ಯಾ ಪುರಾಣ ವಾಚನ ಮಾಡುವುದರಲ್ಲಿ ಸಿದ್ಧಿಯನ್ನೂ ಸಾಧಿಸಿದರು. ಅದೇ ಕಾಲದಲ್ಲಿ "ಸೂರ್ಯಕಾಂತಿ ಕಲ್ಯಾಣ"ವೆಂಬ ಯಕ್ಷಗಾನ ಕೃತಿಯೊಂದರ ರಚನೆ ಕೂಡಾ ಮಾಡಿದರು.

ಗಮಕ ಕಲೆಯಂತೂ ಅವರಿಗೆ ಮೊದಲಲ್ಲೆ ಒಲಿದು ಬಂತು. ತಾಯಿಯ ಆ 'ಪಡಿಗಾಣದಿಂಚರ' ಮಗನ ಈ ಕಂಠಕ್ಕೆ ಇಳಿದು ಬಂತು! ಇಲ್ಲಿ ಅದು ಧನ್ಯವಾಯಿತು. ಮುಳಿಯರು ಗಮಕ ರೀತಿಯಿಂದ ಪುರಾಣವಾಚನ ಮಾಡುತ್ತಿದ್ದುದರ ಕುರಿತು ಆ ಕಾಲದ ಪ್ರಸಿದ್ಧ ತಾಳಮದ್ದಲೆಯ ಅರ್ಥಧಾರಿಗಳೂ, ವಿದ್ವಾಂಸರೂ ಆಗಿದ್ದ ಕವಿಭೂಷಣ ಕೆ. ಪಿ. ವೆಂಕಪ್ಪ ಶೆಟ್ಟರು ಬಣ್ಣಿಸಿದ್ದಾರೆ.

"......1910 ನೆಯ ಇಸವಿ ಅಗೋಸ್ತು ತಿಂಗಳ ಒಂದು ಆದಿತ್ಯ ವಾರ ದಿವಸ ತಿಮ್ಮಪ್ಪಯ್ಯನವರ ಭೇಟಿಯ ಅಪೂರ್ವ ಲಾಭ ನನಗೆ ಲಭಿಸಿತು. ಅಲ್ಲಿ ತಿಮ್ಮಪ್ಪಯ್ಯನವರು ಕನ್ನಡ ಭಾರತ ವನ್ನು ವಾಚನ ಮಾಡಿ ವಿವರಣೆಯೊಂದಿಗೆ ಪದ್ಯಗಳ ಅರ್ಥವನ್ನು ಹೇಳುತ್ತಿದ್ದರು......ನಾನು ರಾಗಯುಕ್ತವಾಗಿ ಹಾಡುವ ಗಮಕ ಕಲೆಯ ವಾಚನವನ್ನು ಕೇಳಿದ್ದು ಅದೇ ಮೊದಲು......ಅಂದಿನ ತಿಮ್ಮಪ್ಪಯ್ಯನವರ ವಾಚನವನ್ನು ಕೇಳಿ ನನ್ನ ಮನಸ್ಸು ಆ ಗಮಕ ಕಲೆಯ ನಾದದಲ್ಲಿ ಲೀನವಾಗಿ ಹೋಗಿತ್ತು......

"......ತಿಮ್ಮಪ್ಪಯ್ಯನವರು ಸಂಸ್ಕೃತ ಮತ್ತು ಕನ್ನಡ ಉಭಯ ಭಾಷೆಗಳನ್ನು ಬಲ್ಲವರೂ, ಸಂಗೀತಸಾಧಕರಾದ ಗಮಕಿ ಗಳೂ, ಕವಿಗಳೂ ಆಗಿದ್ದರು. ಕನ್ನಡದಲ್ಲಿರುವ ಮಹಾ ಕಾವ್ಯ ಗಳನ್ನು ಚೆನ್ನಾಗಿ ಮನಸ್ಸಿನ ಏಕಾಗ್ರತೆಯಿಂದ, ಬಹುಸೂಕ್ಷ್ಮವಾಗಿ ಓದಿ ಮನನ ಮಾಡಿದ ರಸಋುಷಿಗಳಾಗಿದ್ದರು. ಆಗಿನ ಅವರ ಅಭ್ಯಾಸವು ಅವರ ವಯೋಧರ್ಮಕ್ಕೆ ಮೀರಿದ್ದಾಗಿತ್ತು. ಅವರಂತೆ ಚೆನ್ನಾಗಿ ಬರೆದ ಗ್ರಂಥಗಳನ್ನು ಓದಿ ಧಾರಣೆಮಾಡಿಕೊಳ್ಳುವ ಧೀಮಂತರು ಬಹು ಕಡಿಮೆ ಸಂಖ್ಯೆಯಲ್ಲಿ ದೊರೆಯಬಹುದು.

".........ತಿಮ್ಮಪ್ಪಯ್ಯನವರ ಕರ್ಣಾನಂದಕರವಾದ ಆ ವಾಚನವನ್ನು ಕೇಳಲು ಐದಾರು ಮೈಲುಗಳ ದೂರದಿಂದ ಸ್ತ್ರೀ ಪುರುಷ ವೃದ್ಧರೆನ್ನದೆ ದಿನದಿಂದ ದಿನಕ್ಕೆ ಹೆಚ್ಚು ಹೆಚ್ಚು ಜನರು ಬರುತ್ತಿದ್ದರು. ಈ ವಾಚನವು ಅದೊಂದು ಕಾಲದಲ್ಲಿ ಪುರಾಣ ಸಾಹಿತ್ಯದ ವಸಂತೋತ್ಸವವಾಗಿತ್ತೆಂದು ಹೇಳಬೇಕಾಗಿದೆ. ಅವರ ವಾಚನವನ್ನು ಕೇಳಿ ಹೋದ ಗ್ರಾಮಾಂತರಗಳ ಪ್ರತಿಯೊಂದು ಮನೆಗಳಲ್ಲಿ ತಿಮ್ಮಪ್ಪಯ್ಯನವರ ವಾಚನದ ವಿಷಯಗಳೇ ಸುದ್ದಿಯ ಸುಗ್ಗಿಯಾಗಿತ್ತು. ವಾಚನಕ್ಕಾರಂಭಿಸಿದ ಸ್ವಲ್ಪ ದಿನಗಳಲ್ಲೇ ತಿಮ್ಮಪ್ಪಯ್ಯನವರು ನಮ್ಮ ಊರಿನ ಗೃಹಸ್ಥರ ಆದರಕ್ಕೆ ಪಾತ್ರ ರಾದರು. ಬೇರೆ ಬೇರೆ ಕಡೆಗಳಿಂದ ವಾಚನಕ್ಕಾಗಿ ತಿಮ್ಮಪ್ಪಯ್ಯ

ನವರಿಗೆ, ಸಂಭಾವಿತ ಗೃಹಸ್ಥರ ಕರೆಗಳು ಬರಲಾರಂಭವಾದುವು. ತಿಮ್ಮಪ್ಪಯ್ಯನವರ ವಾಚನವಿದ್ದಲ್ಲಿ ಕಿಕ್ಕಿರಿದು ಜನಸಂದಣಿ ಸೇರು ತ್ತಿತ್ತು. ಕೆಲವು ಕಡೆ ಸಿದ್ಧಗೊಳಿಸಿಟ್ಟ ಸ್ಥಳಗಳು ಕುಳಿತುಕೊಳ್ಳಲು ಸಾಲದೆ ಹೋಗಿತ್ತು. ಮಳೆ ಬರುತ್ತಿದ್ದರೂ ಜನರು ಒದ್ದೆಯಾಗಿ ಸಾವಧಾನದಿಂದ ಸದ್ದು ಗದ್ದಲಗಳಿಲ್ಲದೆ ಕೇಳುತ್ತಿದ್ದರು."

ಈಗ ಮೈಸೂರು ಶ್ರೇಷ್ಠನ್ಯಾಯಾಲಯದ ಮುಖ್ಯ ನ್ಯಾಯಾಧೀಶರಾಗಿರುವ ಅಮ್ಮೆಂಬಳ ನಾರಾಯಣ ಪೈಗಳ ತೀರ್ಥರೂಪರಾದ ಅಮ್ಮೆಂಬಳ ಶ್ರೀನಿವಾಸ ಪೈಗಳು ಆ ದಿನಗಳಲ್ಲಿ ಮಂಗಳೂರಿನ ಪ್ರಸಿದ್ಧ ಗೌರವಾನ್ವಿತ ನ್ಯಾಯವಾದಿಗಳಾಗಿದ್ದರು. ಅವರು ಸಾಹಿತ್ಯ ಸಂಗೀತಾದಿ ಕಲೆಗಳಲ್ಲಿ ಆಸಕ್ತರು ಕೂಡಾ ಆಗಿದ್ದರು. ಪುರಾಣವಾಚನವನ್ನು ಮಾಡಿಸಿ ಕೇಳುವ ಅಭಿರುಚಿ ಅವರಿಗಿತ್ತು. ಕವಿಭೂಷಣ ಕೆ. ಪಿ. ವೆಂಕಪ್ಪ ಶೆಟ್ಟರಿಗೆ ಶ್ರೀನಿವಾಸ ಪೈಗಳ ಪರಿಚಯವಿತ್ತು. ಶೆಟ್ಟರು ಮುಳಿಯರ ವಾಚನದ ಹಿರಿಮೆಯನ್ನು ಪೈಗಳೊಡನೆ ಪ್ರಸ್ತಾವಿಸಿದಾಗ ಪೈಗಳು ಆಸಕ್ತಿ ತೋರಿಸಿದರು. ಅವರು ಮುಳಿಯರನ್ನು ಕರೆಯಿಸಿ ಒಂದು ಆದಿತ್ಯವಾರ ಅವರ ಮನೆಯಲ್ಲೆ ವಾಚನವನ್ನು ಮಾಡಿಸಿದರು. ಅಂದು ಮುಳಿಯರ ಪುರಾಣ ವಾಚನಕ್ಕೆ ಶ್ರೀನಿವಾಸ ಪೈಗಳ ಮನಸ್ಸು ಮಾರುಹೋಯಿತು. ಆ ಬಳಿಕ ಪೈಗಳು ಪ್ರತಿ ಭಾನುವಾರ ತಮ್ಮ ಮನೆಯಲ್ಲಿ ಮುಳಿಯರ ಕಾವ್ಯವಾಚನವನ್ನು ಏರ್ಪಡಿಸಿದರು. ಅದಕ್ಕೆ ನಗರದ ಪ್ರತಿಷ್ಠಿತರನೇಕರು ಬಂದು ನೆರೆಯ ಹತ್ತಿದರು. ನ್ಯಾಯವಾದಿಗಳು, ಶಾಲೆ ಕಾಲೇಜುಗಳ ಅಧ್ಯಾಪಕರು. ಪಂಡಿತರು, ರಸಿಕರು ಗುಂಪುಗೂಡಿ ಬರಹತ್ತಿದರು. ಹೀಗೆ ಹಳ್ಳಿಗಾಡಿನ ಈ ಹೂ ನಗರದ ಪ್ರತಿಷ್ಠಿತ ಸಮಾಜದಲ್ಲಿ ತನ್ನ ಪರಿಮಳವನ್ನು ಪಸರಿಸಹತ್ತಿತ್ತು. ಇದು ಮುಳಿಯರ ಭಾಗ್ಯೋದಯಕ್ಕೆ ನಾಂದಿಯಾಯಿತು. ಆಗ ಮಂಗಳೂರು ಕೆನರಾ ಹೈಸ್ಕೂಲಿನ ಆಡಳಿತದಲ್ಲಿ ಪ್ರಭಾವವಿದ್ದ ಶ್ರೀನಿವಾಸ

ಪೈಗಳು ಮುಳಿಯ ತಿಮ್ಮಪ್ಪಯ್ಯನವರನ್ನು ಕ್ರಿ. ಶ. 1911 ರಲ್ಲಿ ಕೆನರಾ ಹೈಸ್ಕೂಲಿನ ಕನ್ನಡ ಪಂಡಿತರಾಗಿ ನೇಮಕ ಮಾಡಿಸಿದರು.

ಇಲ್ಲಿಂದ ಮುಳಿಯರ ಬಾಳಿನ ಕೀರ್ತಿಶಾಲಿ ಅಧ್ಯಾಯದ ಪುಟ ತೆರೆಯಿತು. ಇಷ್ಟರ ತನಕ ಮುಳಿಯರ ಬಾಳಿಗೆ ನಿಶ್ಚಿತ ಗೊತ್ತುಗುರಿಗಳಿರಲಿಲ್ಲ. ಗಟ್ಟಿಯಾದ ನೆಲೆಗಟ್ಟಿರಲಿಲ್ಲ. ಕರೆದಲ್ಲಿ ಹೋಗುವುದು. ಹೇಳಿದಷ್ಟು ಓದುವುದು, ಕೊಟ್ಟಷ್ಟು ಕೊಳ್ಳುವುದು ಎಂದಿದ್ದ ಬಾಳಿಗೆ ಒಂದು ನೆಲೆಯಾಯಿತು. ಇದರಿಂದ ಜೀವಕ್ಕೆ ಬೆಲೆಯೂ ಬಂತು. ಕೆನರಾ ಹೈಸ್ಕೂಲಿನ ನಿಶ್ಚಿತ ಸಂಬಳದ ಭದ್ರತೆಯಿಂದ ಜೀವ ಸ್ವಲ್ಪ ನಿಶ್ಚಿಂತವಾಗಿ ಒಂದೆಡೆ ನೆಲೆಯೂರಲು ಸಾಧ್ಯವಾಯಿತು. ಸಂಬಳವಂತೂ ತಿಂಗಳಿಗೆ ಹದಿನೇಳು ರೂಪಾಯಿಗಳು! ಆದರೆ ಈ ತನಕ ಅದೂ ಇರಲಿಲ್ಲವಲ್ಲ! ಈ ಕೆಲಸ ಸಿಕ್ಕಿದೊಡನೆ ಮುಳಿಯರು ಹಳ್ಳಿಯಲ್ಲಿದ್ದ ಸಂಸಾರವನ್ನು ಮಂಗಳೂರಿಗೆ ಕರೆದು ತಂದು ಮನೆ ಮಾಡಿದರು. ಹೀಗೆ ಎಲ್ಲೋ 'ಕುಂಬಳೆ ಕೋಡಿ'ಯ 'ಕೋಡಿ'ಯಲ್ಲಿದ್ದ ಮುಳಿಯರನ್ನು ಶುಭವು ಕೈ ಹಿಡಿದ 'ಮಂಗಳಾಪುರ'ಕ್ಕೆ ಕರೆತಂದಿತು!

ಈಗ ಮುಳಿಯರು ಅಧ್ಯಾಪಕರಾದರು. ಆದರೆ ಅವರು ಶಾಲೆಯಲ್ಲಷ್ಟೆ ಅಧ್ಯಾಪಕರು; ಉಳಿದ ಹೊತ್ತು ವಿದ್ಯಾರ್ಥಿಯಾಗಿಯೇ ಉಳಿದರು. ಹಳಗನ್ನಡ, ಹೊಸಗನ್ನಡ, ಸಂಸ್ಕೃತ ಕಾವ್ಯಗಳ ಅಭ್ಯಾಸ ಸತತವಾಗಿ ನಡೆದಿತ್ತು. ಈ ತರುಣನ ವಿದ್ವತ್ತಿನ ಆಳ, ಬರವಣಿಗೆಯ ಶಕ್ತಿ ಆಗಲೆ ಎಲ್ಲರಿಗೂ ಪರಿಚಯವಾಗಿತ್ತು. ಪರಿಣಾಮವಾಗಿ ಆಗ ಮಂಗಳೂರಿನಲ್ಲಿದ್ದ ಪೇಜಾವರ ಭೋಜರಾಯರೂ ಮುಳಿಯ ತಿಮ್ಮಪ್ಪಯ್ಯನವರೂ ಸೇರಿ "ಕನ್ನಡ ಕೋಗಿಲೆ" ಎಂಬ ಮಾಸ ಪತ್ರಿಕೆಯನ್ನು 1914 ರಲ್ಲಿ ಪ್ರಾರಂಭಿಸುವಂತಾಯಿತು. ಪತ್ರಿಕೆಯೊಂದರ ಸಂಪಾದಕನಾದುದರಿಂದ ಮುಳಿಯರ ಅನುಭವ ಪ್ರಪಂಚ ವಿಸ್ತಾರಗೊಂಡಿತು. ನಾಡಿನಾದ್ಯಂತದ ಸಾಹಿತಿಗಳ ಪರಿಚಯವಾಯಿತು. ಕನ್ನಡ ನಾಡಿನ

ಬಹಳ ಊರುಗಳನ್ನು ಸುತ್ತಿ ಕಾಣುವಂತಾಗಿ ಜನದ, ನೆಲದ ತಿಳಿವು ಆಯಿತು. ನಿರಂತರವಾದ ಬರವಣಿಗೆ ಅಭ್ಯಾಸವಾಯಿತು. "ಕನ್ನಡ ಕೋಗಿಲೆ" ಕನ್ನಡದ ಮೊದಲ ಕೆಲವೇ ಉತ್ತಮ ಪತ್ರಿಕೆಗಳಲ್ಲಿ ಒಂದು ಎಂದು ಕೀರ್ತಿ ಪಡೆಯಿತು. ಈ ಪತ್ರಿಕೆಯ ಸಂಪಾದಕರಾದುದರಿಂದ ತಿಮ್ಮಪ್ಪಯ್ಯನವರಿಗೆ 'ಪಂಡಿತ ತಿಮ್ಮಪ್ಪಯ್ಯ' ಎಂಬ ಹೆಸರಿನ ಜೊತೆಗೆ 'ಕೋಗಿಲೆ ತಿಮ್ಮಪ್ಪಯ್ಯ' ಎಂಬ ಹೆಸರೂ ಬಂತು. ಒಂದು ದೃಷ್ಟಿಯಿಂದ ಈ ಎರಡು ಹೆಸರುಗಳೂ ಅವರಿಗೆ ಅನ್ವರ್ಥವಾಗಿದ್ದುವು. ಇವೆರಡೂ ಹೆಸರುಗಳು ಸೇರಿಯೇ "ಪೂರ್ಣ ತಿಮ್ಮಪ್ಪಯ್ಯ"ನವರಾಗುತ್ತಿದ್ದರು! ಈ ದಿನಗಳಲ್ಲೆ ಸಾಹಿತ್ಯಿಕ ಪತ್ರಿಕೆ ನಡೆಸುವುದು ದುಸ್ತರವಾಗಿದ್ದರೆ ಅರ್ಧ ಶತಮಾನದ ಹಿಂದೆ ಹೇಗಿರಬಹುದು! ಆರ್ಥಿಕ ದುಃಸ್ಥಿತಿಯಿಂದಾಗಿ 1919 ರಲ್ಲಿ ಈ ಪತ್ರಿಕೆ ಮಂಗಲ ಹಾಡಿತು. ಕಡಲ ಕರೆಯ 'ಕನ್ನಡ ಕೋಗಿಲೆ'ಯ ಕುಕಿಲು ಶಾಶ್ವತವಾಗಿ ನಿಂತು ಹೋಯಿತು. ಆದರೆ ಅದು ಕಣ್ಮುಚ್ಚುವ ಮೊದಲಿನ ಅದರ ಕುಕಿಲು ಮುಳಿಯರ ಸಾಹಿತ್ಯಿಕ ಬಾಳಿಗೆ ವಸಂತವನ್ನು ಕರೆದು ತಂದಿತ್ತು!

ಸಾಹಿತ್ಯಿಕವಾಗಿ ಮುಳಿಯರು ದಿನದಿಂದ ದಿನಕ್ಕೆ ಬೆಳೆಯುತ್ತಿದ್ದರು. ಸಂಪನ್ನರಾಗುತ್ತಿದ್ದರು. ಆದರೆ ಸಾಂಸಾರಿಕವಾಗಿ ಅವರು ನವೆಯುತ್ತಿದ್ದರು. ಆರ್ಥಿಕವಾಗಿ ಬಡವಾಗುತ್ತಿದ್ದರು. 1914 ರಲ್ಲಿ ಮುಳಿಯರ ತಂದೆ ಕೇಶವ ಭಟ್ಟರು ಬಹುಕಾಲದ ಅನಾರೋಗ್ಯದ ಬಳಿಕ ಮೃತರಾದರು. ಈಗ ಇಪ್ಪತ್ತಾರರ ತರುಣ. ಬ್ರಹ್ಮಚಾರಿ ಮುಳಿಯರು ಕುಟುಂಬದ ಯಜಮಾನ. ತಮ್ಮಂದಿರ ಹೊರೆ ಹೊಣೆಯೆಲ್ಲ ಇವರ ಮೇಲೆ. ವೃದ್ಧ, ದುಃಖಿತ ತಾಯಿಯಂತೂ ಮನೆಯೊಳಗಿದ್ದರು. ಆದರೂ ಮುಳಿಯ ಧೃತಿಗೆಡಲಿಲ್ಲ. ಅವರ ಮತಿ ಮಸುಳಲಿಲ್ಲ. 'ಬರುವುದೆಲ್ಲ ಬರಲಿ. ಗೋವಿಂದನ ದಯೆ ಒಂದಿರಲಿ' ಎನ್ನುವ ಛಕ್ತಿ

ಭಾವದಿಂದ ಎದೆಗುಂದದೆ ಸಂಸಾರವನ್ನು ಸಾಗಿಸಿದರು. ಅವರ ಕೃತಿರಚನೆ ನಡೆದೇ ಇತ್ತು.

1916 ರಲ್ಲಿ–ಮುಳಿಯರಿಗೆ ಆಗ ಇಪ್ಪತ್ತೆಂಟು ವರ್ಷಗಳು–ಅವರ ಹುಟ್ಟೂರಿನ ಹತ್ತಿರದ ಕರೋಪಾಡಿ ಗ್ರಾಮದ ಮಹಾಬಲ ಭಟ್ಟರ ಮಗಳು ದೇವಕಿ ಎಂಬ ಹೆಣ್ಣು ಅವರ ಮಡದಿಯಾಗಿ ಮನೆ ತುಂಬಿದರು. ಮಹಾಬಲ ಭಟ್ಟರು ಆ ಪ್ರಾಂತ್ಯದಲ್ಲಿ ಪುಟ್ಟುಕುಂಞಿ ಭಟ್ಟರೆಂದೇ ಪ್ರಸಿದ್ಧರು. ಅವರು ಯಕ್ಷಗಾನ ತಾಳಮದ್ದಳೆಯಲ್ಲಿ ಒಳ್ಳೆಯ ಅರ್ಥಧಾರಿ. ದೇವಕಿ ಮುಳಿಯರ ಮನೆ ತುಂಬಿದ್ದು ಮಾತ್ರವಲ್ಲ ಮನವನ್ನೂ ತುಂಬಿದರು. ಆದರ್ಶ ಹೆಂಡತಿಯಾಗಿ ಬಾಳಿದರು. ದಿನರಾತ್ರಿ ಬರವಣಿಗೆಯಲ್ಲಿ ಮಗ್ನರಾಗಿದ್ದ, ಆರ್ಥಿಕವಾಗಿ ಭಗ್ನರಾಗಿದ್ದ ಪತಿಯೊಡನೆ 'ಚಂ ಚುಂ' ಎನ್ನದೆ ಅನುಕೂಲೆಯಾಗಿ ದಿನಗಳೆದರು. ಮುದ್ದಣನ ಮನೋರಮೆಯಾಗಿ ಬಾಳಿದರು.

1919 ರಲ್ಲಿ ಊರಿನಲ್ಲಿ ಸಿಡುಬಿನ ಹಾವಳಿ ತಲೆದೋರಿತು. ಅದು ಮುಳಿಯರ ಮನೆಯಿಂದ ಅವರ ತಾಯಿಯನ್ನು ಬಲಿಯಾಗಿ ಬೇಡಿತು. 'ಬಡತನದುಪಟಳಕ್ಕಳುಕಿ ಪಡಲಾರದಾ ಪಾಡು ಪಟ್ಟ,' ಬೆಂದು ಸುಣ್ಣವಾದ ಆ ಜೀವ—ಮೂಕಾಂಬಿಕೆ ಮರಣದಲ್ಲಿ ಶಾಂತಿ ಪಡೆದರು. ಮುಳಿಯರ ಬಾಳಿನಲ್ಲಿ ಈ ತಾಯಿಯ ಪ್ರಭಾವ ಬಹಳ. ಚಿಕ್ಕಂದಿನಲ್ಲೆ ಆಕೆ ಮುಳಿಯರಲ್ಲಿ ಸಾಹಿತ್ಯದ ಅಭಿರುಚಿ ಹುಟ್ಟಿಸಿದರು. ಕೃತಿ ರಚನೆಯ ಹುಚ್ಚು ಹಿಡಿಸಿದರು.* ಹಾಡಿನ ರುಚಿ ಹತ್ತಿಸಿದರು. ಪುರಾಣದ ಆಸಕ್ತಿ

---

* ಪಡಿಗಾಣದಿಂಚರದ ಗಮಕದೊಡ್ಡವಣೆಯಿಂ
ಪಾಡಿ ರಾಮಾಯಣವನೂಡಿದೆ ಮಗಂಗೆ ನಿ
ನ್ನಡಿಗೆ ಹೊಸದೊಂದು ರಾಮಾಯಣಂ ಬರೆದು ಕಾ
ಣಿಕೆಯೊವೆನೆಂದು ಪೂಣ್ದುದನದೇಂ ಮರೆದಪೆನೆ?

**—ನವನೀತ ರಾಮಾಯಣದ ಹರಕೆಗಾಣಿಕೆಯಿಂದ.**

ಮೊಳೆಯಿಸಿದರು. ಬನ್ನ ಬವಣೆಗಳಿಗೆ ಸೋಲದ ಆದರ್ಶ ತೋರಿಸಿದರು. ಈ ಮಹಾ ತಾಯಿಗೆ ಮುಳಿಯರ 'ನವನೀತ ರಾಮಾಯಾಣ' ಕೃತಿ ಸಮರ್ಪಿತವಾಗಿದೆ.

1914ರಿಂದ 1918ರ ತನಕ ಮುಳಿಯರು ಕೆನರಾ ಹೈಸ್ಕೂಲಿನಲ್ಲಿ ಕನ್ನಡ ಪಂಡಿತರಾಗಿದ್ದರು. ಹೈಸ್ಕೂಲು ವಿದ್ಯಾರ್ಥಿಗಳಿಗೆ ಪಾಠ ಮಾಡಬೇಕಾಗಿತ್ತು. ಅವರ ವಿದ್ವತ್ತಿನ ಆಳ, ವಿಸ್ತಾರಗಳಿಗೆ ಅನುಗುಣವಾಗಿ ಪಾಠ ಹೇಳಲು ಅದು ಸರಿಯಾದ ಪಾತ್ರವಾಗಿರಲಿಲ್ಲ. ಹೈಸ್ಕೂಲು ವಿದ್ಯಾರ್ಥಿಗಳ ಮಟ್ಟಕ್ಕೆ ಮುಳಿಯರು ಇಳಿದು ಪಾಠ ಹೇಳಬೇಕಾಗಿತ್ತು. ಹೀಗಿದ್ದರೂ ಮುಳಿಯ ಅಲ್ಲೂ ಆದರ್ಶ ಅಧ್ಯಾಪಕರಾಗಿದ್ದರು. ವಿದ್ಯಾರ್ಥಿಗಳ ಆದರಕ್ಕೆ ಪಾತ್ರರಾಗಿದ್ದರು. ಮುಳಿಯರು ಅಲ್ಲಿ ವಿದ್ಯಾರ್ಥಿಗಳ ಪ್ರೀತಿಯನ್ನು ಗಳಿಸಿದುದಕ್ಕೆ ಸಾಕ್ಷಿ ಎಂದರೆ ಅವರು ಕೆನರಾ ಹೈಸ್ಕೂಲಿನಲ್ಲಿ ಅಧ್ಯಾಪಕರಾಗಿದ್ದಾಗ ಬರೆದ "ನಡತೆಯ ನಾಡು" ಮತ್ತು "ಬಡ ಹುಡುಗಿ" ಎಂಬೆರಡು ಕೃತಿಗಳು ಅಲ್ಲಿಯ ವಿದ್ಯಾರ್ಥಿಗಳ 'ಸಹಾಯ ದ್ರವ್ಯ'ದಿಂದ ಪ್ರಕಟವಾದುವು.

1918ರಲ್ಲಿ ಮುಳಿಯರು ತಮ್ಮ ಬಾಳಿನ ಮತ್ತೊಂದು ಮೆಟ್ಟಿಲು ಹತ್ತಿದರು. ಆ ವರ್ಷ ಮಂಗಳೂರಿನ ಸೈಂಟ್ ಎಲೋಸಿಯಸ್ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರ ಹುದ್ದೆ ಖಾಲಿಬಿತ್ತು. ಮುಳಿಯರ ಹೆಸರೇ ಅದಕ್ಕೆ ಎಲ್ಲೆಡೆಗಳಿಂದ ಸೂಚಿತವಾಯಿತು. ಕಾಲೇಜಿನ ಅಧಿಕಾರಿವರ್ಗ ಮುಳಿಯರನ್ನು ಆರಿಸಿತು. 1918 ಸಪ್ಟಂಬರ ಹದಿಮೂರರಂದು ಮುಳಿಯರು ಸೈಂಟ್ ಎಲೋಸಿಯಸ್ ಕಾಲೇಜಿಗೆ ಕನ್ನಡ ಅಧ್ಯಾಪಕರಾಗಿ ಕಾಲಿರಿಸಿದರು. ಅಂದಿನಿಂದ 1948ನೆಯ ಮೇ 31ರ ವರೆಗೆ ಸುಮಾರು ಮೂವತ್ತು ವರ್ಷಗಳ ತನಕ ಅವರು ಅಲ್ಲಿ ಕನ್ನಡ ಅಧ್ಯಾಪಕರಾಗಿ ಕೆಲಸ ಮಾಡಿದರು. ಸಾವಿರ ಸಾವಿರ ಸಂಖ್ಯೆಯ ವಿದ್ಯಾರ್ಥಿಗಳನ್ನು

ಕನ್ನಡದ ಕಟ್ಟಭಿಮಾನಿಗಳನ್ನಾಗಿ ತಯಾರು ಮಾಡಿದರು. ಅವರು ಒಮ್ಮೆ ನಗೆಯಾಡುತ್ತಾ ಎಂದರು: 'ತಂದೆಯೂ ನನ್ನ ಶಿಷ್ಯ; ಮಗನೂ ನನ್ನ ಶಿಷ್ಯ; ಮೊಮ್ಮಗನೂ ನನ್ನ ಶಿಷ್ಯನಾಗಿದ್ದನೊ ತಿಳಿದಿಲ್ಲ'. ಹೀಗೆ ಎರಡು ತಲೆಮಾರಿಗೂ ಮಿಕ್ಕಿದ ವಿದ್ಯಾರ್ಥಿಗಳಿಗೆ ಮುಳಿಯರು ಗುರುಗಳಾಗಿ ವಿದ್ಯಾದಾನ ಮಾಡಿದರು.

ಮುಳಿಯರು ಕಾಲೇಜು ಸೇರಿದ ಕೆಲವು ಕಾಲದಲ್ಲಿ ಕನ್ನಡ ಅಧ್ಯಾಪಕರು ಮದ್ರಾಸು ಸರಕಾರದ ವಿದ್ವತ್ ಪರೀಕ್ಷೆಯಲ್ಲಿ ಪಾಸು ಮಾಡಿರಬೇಕು ಎಂದು ಕಾಯಿದೆಯಾಯಿತು. ಮುಳಿಯರು ಸಂಸ್ಕೃತವನ್ನು ಆಳವಾಗಿ ಅಭ್ಯಾಸಮಾಡಿದ್ದರು. ಕನ್ನಡದಲ್ಲಿ ಅಗಾಧ ಜ್ಞಾನಗಳಿಸಿದ್ದರು. ಪತ್ರಿಕಾ ಸಂಪಾದಕರಾಗಿದ್ದರು. ಅಖಿಲ ಕರ್ಣಾಟಕ ಮೆಚ್ಚುವಂತಹ ವಿದ್ವತ್ಪೂರ್ಣ ಕೃತಿಗಳನ್ನು ರಚಿಸಿದ್ದರು. ಕಾಲೇಜು ಕ್ಲಾಸುಗಳಿಗೆ ಆಗಲೆ ಕಲಿಸುತ್ತಿದ್ದರು. ಆದರೆ ಅವರು ಪಡೆದ ಪದವಿ ಮಾತ್ರ ಪ್ರಾಥಮಿಕ ಶಾಲೆಯ ನಾಲ್ಕನೆಯ ಕ್ಲಾಸು! ಆ ವಿದ್ವಾಂಸ ಕಾಯಿದೆ ಬಂದ ಅನಂತರ ಸರಕಾರದ ಸಮಾಧಾನಕ್ಕಾಗಿ ವಿದ್ವತ್ ಪರೀಕ್ಷೆಗೆ ಕೂತು ಪಾಸಾಗಿ ಬಂದ; ಆ ಮಾತು ಬೇರೆ.

ಕಾಲೇಜಿನಲ್ಲಿ ಮುಳಿಯರ ಪಾಠವೆಂದರೆ ವಿದ್ಯಾರ್ಥಿಗಳಿಗೆ ಹುಚ್ಚು. ಅವರು ಕನ್ನಡ ಕಾವ್ಯ ಭಾಗಗಳನ್ನು ರಾಗಯುಕ್ತವಾಗಿ ಓದುತ್ತಿರುವಾಗ ಎಷ್ಟೋ ಸಲ ಬೇರೆ ಕ್ಲಾಸಿನ ವಿದ್ಯಾರ್ಥಿಗಳೂ ಕಿಟಿಕಿಯ ಬಳಿ ನಿಂತು ಕೇಳುತ್ತಿದ್ದರಂತೆ!

ಮುಳಿಯರ ಪಾಠ ಪ್ರವಚನಗಳ ಕುರಿತು ಅವರ ವಿದ್ಯಾರ್ಥಿಗಳಾಗಿದ್ದ ಶ್ರೀ ಬಿ. ಜಯರಾಮ ಶೆಟ್ಟರು ಸ್ವಾನುಭವದಿಂದ ಹೇಳಿದ್ದನ್ನು ಕೇಳೋಣ: "....ಗಿಡ್ಡ ಆಳು. ಗುಂಡು ದೇಹ. ಕಾಲಿಗೆ ಬೂಟ್ಸು, ಕಚ್ಚೆ, ಸಾಲುಗುಂಬ್ಬಿಗಳ ಕೋಟು, ತಲೆಗೊಂದು

ಟೋಪಿ.* ತುಂಬಿದ ಮುಖ. ಕಣ್ಣುಗಳಲ್ಲಿ ಕಾಣಬರುವ ಸಹಜ ವಾತ್ಸಲ್ಯ. ಉಪಾಧ್ಯಾಯರ ಕೋಣೆಯಿಂದ ಗಂಡು ನಡಿಗೆಯಿಂದ ಬಂದು ವೇದಿಕೆಯೇರುವ ಆ ಹೆಜ್ಜೆಗಳೇನು. ತುಂಬಿದ ವಿದ್ಯಾ ಸಂಪತ್ತು. ಗಂಭೀರವಾಗಿ, ಮುಂದೆ ಪ್ರಸನ್ನವಾಗಿ, ಒಮ್ಮೆ ಹೂಂಕರಿಸಿ ಪುಸ್ತಕವನ್ನು ಎತ್ತಿಕೊಂಡು ಸುಮಾರು ಇನ್ನೂರು ವಿದ್ಯಾರ್ಥಿಗಳ ಮುಂದೆ "ಇನ್ನೊರೆವೆನಾಲಿಸರ್ಜುನ ...," ಎಂದು ಪ್ರಾರಂಭಿಸಿ ಪದ್ಯವನ್ನು ಮುಗಿಸಿ, ಸಂಧಿ ವಿಂಗಡಿಸಿ, ಅರ್ಥವಿಸಿ, 'ಎಣಿಸಿಕೊಳ್ಳಿ, ಬರೆದುಕೊಳ್ಳಿ' ಎನ್ನುವಾಗ ಒಂದು ಗಂಟೆ ಅನಾಯಾಸವಾಗಿ ಕಳೆಯುತ್ತಿತ್ತು. ಶೃಂಗಾರದ ಪದ್ಯಗಳು ಬಂದಾಗ ವಿದ್ಯಾರ್ಥಿಗಳು, ಈ ಪದ್ಯವನ್ನು ಹೇಗೆ ಅರ್ಥವಿಸು ವರೋ ಎಂದು ಉತ್ಸುಕತೆಯಿಂದ ಸಂತೋಷ (ವಿನೋದ)ಕ್ಕೆ ಆಸ್ಪದ ದೊರೆಯುವುದೆಂದು ಸಿದ್ಧತೆ ಮಾಡುತ್ತಿರುವಾಗ ನಾವು ಎಣಿಸುವ ಎಷ್ಟೋ ಸಂದರ್ಭಗಳು ಸುಖವಾಗಿ, ಸಹಜವಾಗಿ ಆಭಾಸಕ್ಕೆ ಎಡೆಯಿಲ್ಲದೆ ಅವರಿಂದ ಅರ್ಥವಿಸಲ್ಪಡುತ್ತಿದ್ದುವು.

"... ಕನ್ನಡ ಭಾಷೆ ಮತ್ತು ಪುರಾಣ ಕಾವ್ಯಗಳಲ್ಲಿ ಆಸಕ್ತಿ ಯಿಲ್ಲದ ವಿದ್ಯಾರ್ಥಿಗಳು ಕೂಡಾ ಪಂಡಿತರ ಪ್ರವಚನದಿಂದ ಆಕರ್ಷಿಸಲ್ಪಟ್ಟು ಪ್ರತಿಯೊಂದನ್ನು ಬರೆದುಕೊಳ್ಳುತ್ತಿದ್ದರು. .... ....".... ನನ್ನ ಗುರುದೇವ ಎಂದೂ ಹೆಮ್ಮೆಪಟ್ಟವರಲ್ಲ. ನಮ್ಮನ್ನು (ವಿದಾರ್ಥಿಗಳನ್ನು) ತೆಗಳಿದವರಲ್ಲ....."

ಇನ್ನೊಬ್ಬರು ಮುಳಿಯರು ಪಾಠ ಹೇಳುವಾಗ ಕಾವ್ಯದ ರಸಭಾವಗಳಲ್ಲಿ ತನ್ಮಯರಾಗುತ್ತಿದ್ದ ಮತ್ತು ಕೇಳುಗರನ್ನು ಆ

---

* ಮೊದಲು ಮುಳಿಯರು ಹದಿನಾರು ಮೊಳ ಉದ್ದ ವಸ್ತ್ರದ ಮುಂಡಾಸನ್ನು ಸೊಗಸಾಗಿ ಸುತ್ತಿಕೊಳ್ಳುತ್ತಿದ್ದರು. 1940ರಲ್ಲಿ ಅವರು ತೀವ್ರವಾದ ಕಾಲುನೋವಿನಿಂದ ಸೋತು ಆಸ್ಪತ್ರೆ ಸೇರಿದರು. ಆಸ್ಪತ್ರೆ ಯಿಂದ ಹಿಂದಿರುಗಿದ ಅನಂತರ ಮುಳಿಯರು ಮುಂಡಾಸು ಕಟ್ಟಿಕೊಳ್ಳಲೇ ಇಲ್ಲ. ಟೊಪ್ಪಿಗೆಯನ್ನಿಟ್ಟುಕೊಳ್ಳ ಹತ್ತಿದರು.

ರಸ ಪ್ರವಾಹದಲ್ಲಿ ತೇಲಿಸಿಕೊಂಡು ಹೋಗುತ್ತಿದ್ದುದರ ಕುರಿತು ಹೇಳಿದ್ದಾರೆ: "......ಭವ ಭೂತಿಯ ಉತ್ತರರಾಮಚರಿತೆಯನ್ನು ಪಾಠ ಹೇಳುತ್ತಿದ್ದರು. ಸೀತಾ ಪರಿತ್ಯಾಗದ ತರುವಾಯ ಶ್ರೀ ರಾಮಚಂದ್ರನ ಮರುಕವನ್ನೂ ಸೀತೆಯ ಗ್ಲಾನಿಯನ್ನೂ ಬಣ್ಣಿಸುವ ಭಾಗ ಬಂದಾಗ ಅವರೂ ಈ ಲೇಖಕನೂ ಜತೆಯಾಗಿ ಅತ್ತಿದ್ದರು."

ಮುಳಿಯರು ವಿದ್ಯಾರ್ಥಿಗಳ ಪ್ರೀತಿಯನ್ನು ಗಳಿಸಿದ್ದರು. ಅವರನ್ನು ಗದರಿಸಿ ಸುಮ್ಮನಿರಿಸುವ ಗೋಜಿಗೆ ಎಂದೂ ಹೋಗಲಿಲ್ಲ. ವಿದ್ಯಾರ್ಥಿಗಳನ್ನು ತನ್ನ ಮಕ್ಕಳಂತೆ ಅಕ್ಕರೆಯಿಂದ ಕಂಡರು. ಪ್ರಿಯವಾಗಿ ಬೋಧಿಸಿದರು. ನಯವಾಗಿ ತಿದ್ದಿದರು. ಅವರ ಭಾಷೆಯ ಬೆಳವಣಿಗೆಯ ಕಡೆಗೆ ಸರಿಯಾಗಿ ಗಮನ ಕೊಟ್ಟರು. ಕನ್ನಡದ ಕುರಿತು ತಿಳಿಯದಂತೆಯೆ ಅಭಿಮಾನ ಮೂಡಿಸಿದರು; ಬೆಳಸಿದರು.

ಹಾಗೆಂದು ಮುಳಿಯರಿಗೆ ಕನ್ನಡವೆಂಬ ಅತಿ ವ್ಯಾಮೋಹವಿಲ್ಲ. ಕನ್ನಡದ ಮೇಲೇನೊ ಪ್ರೀತಿ. ಉಳಿದ ಭಾಷೆಗಳ ಮೇಲೆ ಅನಾದರವಿಲ್ಲ. ಎಲ್ಲ ಭಾಷೆಗಳ ಮೇಲೆ ಸಮಾನ ಗೌರವ. ಭಾಷೆ ಯಾವುದೇ ಆಗಲಿ ದೋಷವಿಲ್ಲದೆ, ಬೆರಕೆಯಿಲ್ಲದೆ ಸ್ಪಷ್ಟವಾಗಿ ಆಡಬೇಕು ಅಷ್ಟೆ. ಒಮ್ಮೆ ಅವರ ಕೆಲವು ವಿದ್ಯಾರ್ಥಿಗಳು ಮಂಗಳೂರಿನ ಮಾರ್ಗದಲ್ಲಿ ಕಾಲದ ಪ್ಯಾಶನಿನಂತೆ ಇಂಗ್ಲೀಷ್ ಕನ್ನಡ ಬೆರಸಿ ಮಾತಾಡುತ್ತ ನಡೆದಿದ್ದರು. ಅವರ ಹಿಂದಿನಿಂದ ಮುಳಿಯರು ನಡೆದು ಬರುತ್ತಿದ್ದುದು ವಿದ್ಯಾರ್ಥಿಗಳಿಗೆ ಅರಿವಿದ್ದಿಲ್ಲ. ಹಿಂದೆ ತಿರುಗಿದಾಗ ಮುಳಿಯರು! ಮುಗುಳು ನಗುತ್ತ ಮುಳಿಯರು ವಿದ್ಯಾರ್ಥಿಗಳೊಡನೆ ಅಂದರು "ಯಾವುದಾದರೂ ಒಂದು ಭಾಷೆಯಲ್ಲಿ ಚೆನ್ನಾಗಿ ಮಾತಾಡಿರಿ!" ವಿದ್ಯಾರ್ಥಿಗಳಿಗೆ ಮಾರ್ಗದಲ್ಲೂ ಮಾರ್ಗದರ್ಶನ ಮಾಡಿದರು!

ಒಮ್ಮೆ ಅನಾರೋಗ್ಯದಿಂದ ಅವರ ವಿದ್ಯಾರ್ಥಿಯೋರ್ವನಿಗೆ

ಕೆಲವು ದಿನ ಶಾಲೆಗೆ ಬರಲಾಗಲಿಲ್ಲ. ಸ್ವಲ್ಪ ಗುಣ ಹೊಂದಿ ಆ ವಿದ್ಯಾರ್ಥಿ ಒಂದು ದಿನ ಶಾಲೆಗೆ ಬಂದಾಗ ತಿಮ್ಮಪ್ಪಯ್ಯನವರು ಕೇಳಿದರು "ಈಗ ಕ್ಷೇಮವಾಗಿದ್ದೀರಾ?" ವಿದ್ಯಾರ್ಥಿ ಉತ್ತರಿಸಿದ "ಜ್ವರವು ಬಿಟ್ಟಿದೆ. ಆದರೆ ವೀಕ್‌ನೆಸ್ (weakness) ಇನ್ನೂ ಇದೆ." ಮುಳಿಯರು ಕೂಡಲೇ ಅಂದರು: "ಹೌದು ನಿಮ್ಮನ್ನು ಕಾಣುವಾಗಲೇ ನಿಮಗೆ ನಿತ್ರಾಣವಿದೆಯೆಂದು ತಿಳಿಯುತ್ತದೆ." ಈ ಒಂದು ಮಾತಿನಿಂದಲೇ ವಿದ್ಯಾರ್ಥಿಗೆ ಏನನ್ನು ಹೇಳ ಬೇಕಾಗಿತ್ತೊ, ಆತನನ್ನು ಹೇಗೆ ತಿದ್ದಬೇಕಾಗಿತ್ತೊ ಅದನ್ನೆಲ್ಲ ನಯವಾಗಿ, ಪ್ರಿಯವಾಗಿ ಸಾಧಿಸಿದರು ಈ ಗುರು! ನೀನು ಹೀಗೆ ಹೇಳಿದ್ದು ತಪ್ಪು ಎಂಬ ಆರೋಪವಿಲ್ಲ. ನೀನು ಹೀಗೆ ತಿದ್ದಿಕೋ ಎಂಬ ಆಜ್ಞೆಯಿಲ್ಲ. ಬಿಡಿ. ನೀನು ಎಂಬ ಏಕವಚನವೂ ಇಲ್ಲ. ಈ ರೀತಿ, ಈ ನಯ ಅನ್ಯತ್ರ ಸುಲಭವಾಗಿ ಕಾಣದ್ದು. ಇಂತಹ ಗುರುವನ್ನು ಹೇಗೆ ಮರೆತಾರು ಶಿಷ್ಯರು?

ವಿದ್ಯಾರ್ಥಿಗಳಿಗೆ ಮಾತ್ರವಲ್ಲ ಸಮಾನರಿಗೂ ಸಹದ್ಯೋಗಿ ಗಳಿಗೂ ಅವರು ಓಜರಾಗಿಯೇ ಬಾಳಿದರು. ಶ್ರೀ ನಾ. ಕಸ್ತೂರಿ ಮತ್ತು ಮುಳಿಯ ತಿಮ್ಮಪ್ಪಯ್ಯನವರು ಒಮ್ಮೆ ಮಡಿಕೇರಿಯಲ್ಲಿ ಉಪನ್ಯಾಸಕ್ಕೆಂದು ಬಂದವರು ಒಟ್ಟಾದರು. ಎರಡು ದಿನ ಜೊತೆಯಾಗಿ ಉಳಿದರು. ಆ ದಿನಗಳ ಅನುಭವವನ್ನು ಹೇಳುತ್ತಾ ಕಸ್ತೂರಿಯವರು ಬರೆಯುತ್ತಾರೆ: "......ಆ ಎರಡು ದಿನವೂ ಅವರ (ಮುಳಿಯ ತಿಮ್ಮಪ್ಪಯ್ಯನವರ) ಸಹವಾಸ ಭಾಗ್ಯ ಮಾತ್ರ ವಲ್ಲ ಶಿಕ್ಷಣ ಶಾಸ್ತ್ರದ ಎರಡು ಅಮೂಲ್ಯ ಪಾಠಗಳು ಕೂಡಾ ದೊರೆತವು.

"......ಮಡಿಕೇರಿಯ ಚಳಿ. ರಾತ್ರಿಯ ಹನ್ನೊಂದು ಗಂಟೆ. ನಿದ್ದೆಗಣ್ಣು ಎಂಬುದನ್ನು ಲೆಕ್ಕಿಸದೆ ವಿಷಯಗ್ರಹಣಕ್ಕೆ ಕಾತರನಾದ ಒಬ್ಬ ವ್ಯಕ್ತಿ ಸಿಕ್ಕಿದ ಕೂಡಲೇ ಆತ ಎಷ್ಟೇ ಅಪರಿಚಿತನಾದರೂ ಹೀಗೆ ಸಂತೋಷದಿಂದ ತನ್ನ ಆಲಸ್ಯವನ್ನು ಲೆಕ್ಕಿಸದೆ ಸಾಹಿತ್ಯಾಭಿ

ರುಚಿಯುನ್ನು ತುಂಬಬಲ್ಲ ಅವರ ಪ್ರವಚನ ಚಾತುರ್ಯಕ್ಕೆ ನಾನು ತಲೆ ಬಾಗಿದೆ. ಒಂದು ಬಾರಿ ಕೂಡಾ ಆಕಳಿಸಲಿಲ್ಲ. ಇಂದಿಗೂ ಅಂದಿನ ಅವರ 'ಪಾಠ'ದ ನೆನಪಿನಿಂದಲೇ ಒಂದು ಗಂಟೆ ಹೊತ್ತು "ಅರಿಕೇಸರಿಪಂಪ" ಎಂಬ ವಿಷಯುವಾಗಿ ಯಾವ ಕಾಲೇಜು ಸಭೆಯುಲ್ಲೂ ಭಾಷಣ ಮಾಡಬಲ್ಲೆ. ಅಷ್ಟು ಸಾಮಗ್ರಿಯುನ್ನು ಸಂಗ್ರಹಿಸಿ ಕ್ರೋಢೀಕರಿಸಿ ಕಾಂತಾಸಮ್ಮಿತದ ರೀತ್ಯಾ ತಿಮ್ಮಪ್ಪಯ್ಯ ನವರು ಆ ದಿನ ನನಗೆ ಒದಗಿಸಿದರು. ಎಂತಹ ಉತ್ತಮ ಉಪಾಧ್ಯಾಯ ಅವರು!" ಶ್ರೀ ನಾ. ಕಸ್ತೂರಿಯಂತಹ ಸಾಹಿತಿ, ಕಾಲೇಜು ಪ್ರಾಧ್ಯಾಪಕರಿಂದಲೂ ಇಂತಹ ಪ್ರಶಂಸೆ ಪಡೆಯ ಬೇಕಾದರೆ ಮುಳಿಯರ ಪಾಠ ಪ್ರವಚನಗಳ ಶಕ್ತಿ, ಸೊಗಸುಗಳು ಎಂತಹದಿರಬೇಡ! ಫೀಸುಕೊಟ್ಟು ಕ್ಲಾಸು ಸೇರಿದವರಿಗೆ ಮಾತ್ರ ವಲ್ಲ ಹತ್ತಿರ ಬಂದವರಿಗೆಲ್ಲ, ಸನಿಯ ನಿಂದವರಿಗೆಲ್ಲ ಮುಳಿಯರು ಆಚಾರ್ಯರಾಗಿಯೆ ಬಾಳಿದರು. ಆಚಾರ್ಯರಾಗಿ ಮುಳಿಯರು ಗಳಿಸಿದ ಪ್ರೀತಿ, ಕೀರ್ತಿಗಳು, ಸಾಹಿತಿಯಾಗಿ ಅವರು ಅಖಿಲ ಕರ್ನಾಟಕದಲ್ಲಿ ಗಳಿಸಿದ ಖ್ಯಾತಿ ಒಲವುಗಳಿಗಿಂತ ಎಳ್ಳಿನಷ್ಟೂ ಕಡಿಮೆಯಾದುದಲ್ಲ.

1927 ರಲ್ಲಿ ಮಂಗಳೂರಲ್ಲಿ ಅಖಿಲ ಕರ್ನಾಟಕ ಹದಿಮೂರ ನೆಯ ಸಾಹಿತ್ಯ ಸಮ್ಮೇಳನ ಸೇರಿತು. ದಿ. ತಾತಾಚಾರ್ಯರು ಅಧ್ಯಕ್ಷರಾಗಿದ್ದರು. ಮುಳಿಯರು ಆಗಲೆ 'ಕನ್ನಡ ಕೋಗಿಲೆ' ಪತ್ರಿಕೆಯ ಮೂಲಕವೂ ತಮ್ಮ ಸಾಹಿತ್ಯ ಕೃತಿಗಳ ಮೂಲಕವೂ ಪ್ರಸಿದ್ಧರಾಗಿದ್ದರು. ಆ ಸಮ್ಮೇಳನದಲ್ಲಿ ಅವರು "ಆಂಡಯ್ಯನೂ ಕನ್ನಡಮೆನಿಪ್ಪಾ ನಾಡೂ" ಎಂಬ ಪ್ರೌಢ ಲೇಖನವನ್ನು ಬರೆದು ಓದಿದರು. ಆಗ ಕನ್ನಡ ಸಾರಸ್ವತಲೋಕ ಎಚ್ಚತ್ತು ಮತ್ತೊಮ್ಮೆ ಮುಳಿಯರ ಪ್ರತಿಭೆ, ಪಾಂಡಿತ್ಯಗಳನ್ನು ಗುರುತಿಸಿಕೊಂಡಿತು. ಬಹಳ ಜನ ಹಿರಿಯ ಸಾಹಿತಿಗಳ ನಿಕಟ ಪರಿಚಯಕ್ಕೆ ಅದು ಆಸ್ಪದ ಮಾಡಿಕೊಟ್ಟಿತು. ಹತ್ತಿರ ಬಂದಾಗ ಅವರಿಗೆ ಮುಳಿಯರ

ಸಾಹಿತ್ತಿಕ ವ್ಯಕ್ತಿತ್ವದ ಎತ್ತರ ಬಿತ್ತರಗಳ ಅರಿವಾಯಿತು. ಆಗ ಅಂದುಕೊಂಡರು ಅವರು: 'ಓ ಇಲ್ಲೊಬ್ಬನಿದ್ದಾನೆ ನಾವು ಎತ್ತಿ ಕೊಳ್ಳಬೇಕಾದವ, ಹೊತ್ತುಕೊಳ್ಳಬೇಕಾದವ.'

ಮೇಲಿನ ಯೋಚನೆ ಅಂದಿನಿಂದ ನಾಲ್ಕು ವರ್ಷಗಳೊಳಗೆ ಕಾರ್ಯಗತವಾಯಿತು. 1931ಕ್ಕೆ ಕಾರವಾರದಲ್ಲಿ ಹದಿನೇಳನೆಯ ಅಖಿಲ ಕರ್ನಾಟಕ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಗೆ ಮುಳಿಯರು ಅವಿರೋಧವಾಗಿ ಆಯ್ಕೆಯಾದರು. ಒಬ್ಬ ಸಾಹಿತಿಗೆ ಕನ್ನಡ ಜನ ಕೊಡಬಹುದಾದ ಇದಕ್ಕಿಂತ ದೊಡ್ಡ ಪುರಸ್ಕಾರ ಬೇರಿಲ್ಲ. ಇದು ಮುಖನೋಡಿ ಹಾಕಿದ ಮಣೆಯಲ್ಲ. ಹಣ ನೋಡಿ ಕೊಟ್ಟ ಸ್ಥಾನವಲ್ಲ. ಅಧಿಕಾರ ನೋಡಿ ನೀಡಿದ ಗೌರವವಲ್ಲ. ಇದು ಯೋಗ್ಯತೆಗೆ ಸಿಕ್ಕಿದ ಪುರಸ್ಕಾರ. ಗುಣಕ್ಕೆ ದೊರೆತ ಮಾನ್ಯತೆ. ಹೀಗೆ ಸಮಸ್ತ ನಾಡಿನ ಗೌರವಾದರಗಳು ಮುಳಿಯರಿಗೆ ದೊರಕು ವಾಗ ಅವರಿನ್ನೂ ನಲುವತ್ತಮೂರರ ತಾರುಣ್ಯದಲ್ಲಿದ್ದರು.

"ನಮ್ಮ ಕನ್ನಡದಲ್ಲಿ ನುರಿತು ಹದವಡೆದ ಬಲ್ಲವರೊಳಗೆ ಒಂದೆರಡನೆಯ ಬೆರಳಿನ ಲೆಕ್ಕಕ್ಕೆ ಬರುವ ಯೋಗ್ಯತೆಯುಂತಿರಲಿ; ಕಡೆಯಣ ಕಿರು ಬೆರಳಿನಲ್ಲಾದರೂ ಎಡೆಗೊಳ್ಳುವಷ್ಟು ಹುರುಳು ನನ್ನಲ್ಲಿದೆಯೆಂದು ಎಣಿಸುವಷ್ಟು ಎದೆಗಟ್ಟಿ ನನ್ನದಲ್ಲ" ಎಂದು ತಮ್ಮ ಸಹಜ ವಿನಯದೊಡನೆ ಮೊದಲಿಟ್ಟು, ಪ್ರಾರಂಭಿಸಿದ ಮುಳಿಯರ ಅಂದಿನ ಅಧ್ಯಕ್ಷ ಭಾಷಣ 'ಅವರ ವ್ಯಂಗ್ಯಾರ್ಥ, ಗ್ರಹಣಶಕ್ತಿ, ರಸಜ್ಞತೆ, ಸಹೃದಯತೆ. ನವೀನಮಾರ್ಗ ಪ್ರವರ್ತನೆ ಯಲ್ಲಿ ಗೌರವ. ಉತ್ಸಾಹ. ಪ್ರಾಚೀನ ಅರ್ವಾಚೀನ ಮಾರ್ಗಗಳ ಸಮನ್ವಯ' ಎಲ್ಲವನ್ನೂ ಪ್ರತಿಬಿಂಬಿಸಿದೆ.

ಸಾಹಿತ್ಯ ಸಮ್ಮೇಳನ ಬರೀ ವಿನೋದ ಕೂಟವಾಗದೆ, ಜಾತ್ರೆ ಯಾಗದೆ; ಸಾಹಿತ್ಯ ಪರಿಷತ್ತು ಕ್ರಿಯಾರಾಹಿತ್ಯ ಅಧಿಕಾರದ ಗದ್ದುಗೆಯಾಗದೆ ಇರಬೇಕಾದುದರ ಕುರಿತೂ ಅವರು ನಿಷ್ಠುರ ವಾಗಿ ನುಡಿದರು: "ಸಾಹಿತ್ಯ ಸಮ್ಮೇಳನವೆಂಬುದು ವರ್ಷಕ್ಕೊಮ್ಮೆ

ಜರಗುವುದು; ಸಾಹಿತ್ಯೋದ್ಧಾರಕ್ಕಾಗಿ ಕೆಲವು ನಿರ್ಣಯಗಳನ್ನು ಮಾಡುವುದು; ಆ ಮೇಲೆ ಒಟ್ಟುಗೂಡಿ ವಿಚಾರಿಸುವುದೆಂದರೆ ಆ ಮೇಲಿನ ವರ್ಷದಲ್ಲಿ. ಆದರಿಂದಾಗಿ ಈ ವರೆಗೆ ನಿರ್ಣಯಿಸಲ್ಪಟ್ಟ ಉದ್ದೇಶಗಳು ಬಹಳ ಮಟ್ಟಿಗೆ ಕಾರ್ಯರೂಪವಾಗಿ ತಲೆದೋರ ಲಿಲ್ಲವೆಂದು ತೋರುತ್ತದೆ. ಈ ಉದ್ದೇಶಗಳನ್ನು ಪೂರ್ತಿಗೊಳಿಸ ಲಿಕ್ಕೂ, ಇತರ ಸಾಹಿತ್ಯ ಸುಧಾರಣೆಗಳನ್ನು ಒದಗಿಸಲಿಕ್ಕೂ ಸಮರ್ಥವಾದ ಒಂದು 'ಕಾರ್ಯಕಾರಿ ಮಂಡಲಿ' ನಮಗೆ ಅವಶ್ಯ ವೆಂದು ನನ್ನ ಭಾವನೆ" ಎಂದು ತಮ್ಮ ಸೂಚನೆಯನ್ನಿತ್ತರು. ಆ ಕಾಲದಲ್ಲೇ ಪರಿಷತ್ತಿನೊಳಗೆ ಸಾಹಿತ್ಯದ ಗಂಧಗಾಳಿ ಇಲ್ಲ ದವರು ನುಸುಳಲೆಳಸಿದ ರಾಜಕೀಯದ ಸುಳಿವು ಮುಳಿಯರಿಗೆ ಸಿಕ್ಕಿರಬೇಕು. ಅವರು ಮುಂದುವರಿಸಿ ಹೇಳಿದರು "ಅಖಂಡ ಕರ್ನಾಟಕದ ನುರಿತ ವಿದ್ವಾಂಸರೆ ಅದರಲ್ಲಿ ಸದಸ್ಯರಾಗಿರಬೇಕು".

ಜೊತೆಗೆ ಆ ಅಧ್ಯಕ್ಷ ಭಾಷಣದಲ್ಲಿ ಕರ್ನಾಟಕ ಏಕೀಕರಣದ ಆವಶ್ಯಕತೆಯ ಕುರಿತೂ ಒತ್ತಿ ಹೇಳಿದರು.

ಮುಳಿಯರು ಅಖಿಲ ಕರ್ನಾಟಕ ಪ್ರಸಿದ್ಧರಾಗಿ ಬೆಳೆದು ನಿಂತರು. ಅವರ ಸಾಹಿತ್ಯರಚನೆಯೂ ನಿರಂತರವಾಗಿ ನಡೆಯಿತು "ನಾಡೋಜ ಪಂಪ" ಮೇರುಕೃತಿ ರಚನೆಯಾಯಿತು. ಒಬ್ಬ ಕವಿಯ ಕುರಿತು ಒಬ್ಬ ಲೇಖಕ ಇಂತಹ ಬೃಹದ್‌ಕೃತಿ ರಚನೆ ಮಾಡಿರುವುದನ್ನು ಕಾಣುವುದು ಕಷ್ಟಸಾಧ್ಯ. ಪಂಪನ ಸತ್ವ, ಸಾರ, ಆಳ, ಅಗಲ ಎಲ್ಲವುಗಳ ಕುರಿತ ಕೂಲಂಕುಷ ವಿಮರ್ಶೆ ಅಲ್ಲಿದೆ. "ನಾಡೋಜ ಪಂಪ" ಒಂದೇ ಒಂದು ಕೃತಿ ಮುಳಿಯರ ಹೆಸರನ್ನು ಶಾಶ್ವತವಾಗಿಡಲು ಸಾಕು. ಅದು ಪೂರ್ಣದೋಷ ದೂರವಾದ ಕೃತಿ ಎನ್ನದೆ ಹೋದರೂ ಕನ್ನಡದ ಅಮರ ಕೃತಿ ಗಳಲ್ಲಿ ಒಂದು ಎಂಬುದರಲ್ಲಂತೂ ಎರಡು ಮಾತಿರದು.

ಪಂಪನೆಂದರೆ ಮುಳಿಯರಿಗೆ ಎಲ್ಲಿಲ್ಲದ ಅಕ್ಕರೆ. ಪಂಪ ಕವೀಂದ್ರ 'ರುಂದ್ರ ವಚನಾಮೃತ ವಾರ್ಧಿಯನೀಸು'ವುದೆಂದರೆ

ಅವರಿಗೆ ಮಿತಿಯಿಲ್ಲದ ಆಮೋದ. ಸಾಮಾನ್ಯರೆಂದೇನು ಪಂಡಿತರೂ ಹೆದರಬೇಕಾದ ಪಂಪಸಾಹಿತ್ಯಸಾಗರದಲ್ಲಿ ಮುಳುಗಿ ಅವರು ಅಲ್ಲಿನ ಮುತ್ತು ರತ್ನಗಳನ್ನು ಹೆಕ್ಕಿತಂದು ಪೋಣಿಸಿ ಕೊಟ್ಟರು ನಮಗೆ. 'ಆದಿಪುರಾಣ ಸಂಗ್ರಹ', 'ಸಮಸ್ತಭಾರತ ಸಾರ'ಗಳು ರೂಪುಗೊಂಡುವು.

ಮುಳಿಯರ ಸಾಹಿತ್ಯಿಕ ಜೀವನದಲ್ಲಿ ಪಂಪನ ಪಾಲು ಶೇಕಡಾ ಎಪ್ಪತ್ತೈದು ! ಮುಳಿಯರು ಎದೆದುಂಬಿ ಹಾಡಿದರು,

" ಪಂಪನ ಗಾದೆ ಪಂಪನೊಲವಿಂಬಲಿದಾ ನುಡಿಗಟ್ಟು ಪಂಪನೊಂ ।
ದಿಂಪಿನ ಗೆಯ್ಮೆ ಪಂಪನುಸುರಿಂದೊಸರೆದ್ದು ತಿರುಳ್ದ ಬಾಸೆಯಾ
ಪಂಪನ ದೇಸಿಯಿಂ ದೆಸೆಯನಪ್ಪುವ ಕಂಪಿನ ದಾರಿ ವಸ್ತುರೂ ।
ಪಂ ಪೆಣೆವಂದಮುಂ ಬಗೆಯೆ ಪಂಪನ ಕನ್ನಡಮಲ್ತೆ ಕನ್ನಡಂ ॥

ಪಂಪನಿಗೆ ಮುಳಿಯರೆಷ್ಟು ಋಣಿಯೊ ಮುಳಿಯರಿಗೆ ಪಂಪನೂ ಅಷ್ಟೆ ಋಣಿಯಾಗಿರಬೇಕು ! ಒಂದು ಸಾವಿರ ವರ್ಷಗಳ ಬಳಿಕ ಇಂತಹ ಒಬ್ಬ ಸಮರ್ಥ ವ್ಯಾಖ್ಯಾನಕಾರ, ಇಂತಹ ಒಬ್ಬ ರಸಜ್ಞನಾದ ಗುಣೈಕ ಪಕ್ಷಪಾತಿ ಪ್ರಶಂಸಕ ದೊರೆತುದು ಪಂಪನ ಭಾಗ್ಯ !

ಕ್ರಿ. ಶ. ಸಾವಿರದ ಒಂಬೈನೂರ ನಲುವತ್ತೊಂದನೆಯ ದಶಂಬರ ತಾರೀಕು ಇಪ್ಪತ್ತನಾಲ್ಕಕ್ಕೆ ಲಕ್ಷ್ಮೇಶ್ವರದಲ್ಲಿ ನಡೆದ ಪಂಪನ ಸಹಸ್ರ ಸಾಂವತ್ಸರಿಕೋತ್ಸವಕ್ಕೆ ಮುಳಿಯರಲ್ಲದೆ ಬೇರಾರು ಅಗ್ರಸ್ಥಾನವಹಿಸಬಹುದು? ಅಂದು ಲಕ್ಷ್ಮೇಶ್ವರದಲ್ಲಿ ನೂರಒಂದು ಎತ್ತುಗಳನ್ನು ಕಟ್ಟಿದ ಗಾಡಿಯಲ್ಲಿ ಮುಳಿಯರನ್ನು ಮೆರವಣಿಗೆ ಮಾಡಿಸಲಾಯಿತು. ಅಂದು ಮುಳಿಯರ ಕೊರಳಿಗೆ ಬಿದ್ದಮಾಲೆಗಳ ಸಂಖ್ಯೆಗೆ ಮಿತಿಯಿಲ್ಲ. ಈ ಅದ್ಭುತ ಮೆರವಣಿಗೆ. ಈ ಅಪೂರ್ವ ಪ್ರೀತಿ ಯಾರಿಗೆ? ಪಂಪನ 'ಸೇವೆ'ಯಿಂದ ಧನ್ಯರಾದ ಮುಳಿಯರಲ್ಲಿ ಪಂಪನನ್ನೆ ಕಂಡರೇನು ಕನ್ನಡಿಗರು!

ಶಂಕರ ಭಟ್ಟರು ಮುಳಿಯರ ಒತ್ತಿನ ತಮ್ಮ. ಅವರು ಮೊದಲು ಮಂಗಳೂರಲ್ಲಿ ಬಾಸೆಲ್ ಮಿಶನ್ ಶಾಲೆಯಲ್ಲಿ ಕನ್ನಡ

ಪಂಡಿತರಾಗಿದ್ದರು. ಮತ್ತೆ ಸ್ವಲ್ಪ ಕಾಲ ಸೈಂಟ್ ಎಲೋಸಿಯಸ್ ಕಾಲೇಜಿನಲ್ಲೂ ಕನ್ನಡ ಪಂಡಿತರಾಗಿ ದುಡಿದರು. ಕೊನೆಗೆ ಅವರು ಜಿಲ್ಲಾ ಬೋರ್ಡ್ ಕೆಲಸಕ್ಕೆ ಸೇರಿ ಕುಂದಾಪುರ ಬೋರ್ಡ್ ಹೈಸ್ಕೂಲಿನ ಕನ್ನಡ ಪಂಡಿತರಾಗಿ ದುಡಿದರು. ಅವರು ಮುಳಿಯರ ಸಾಹಿತ್ಯ ರಚನೆಗೆ ಪ್ರೋತ್ಸಾಹ ಕೊಡುತ್ತಿದ್ದವರಲ್ಲಿ ಮುಖ್ಯರು. ಮುಳಿಯರ ಏಕಮಾತ್ರ ಪ್ರಕಟಿತ ಸಾಮಾಜಿಕ ಕಾದಂಬರಿ "ಪಶ್ಚಾತ್ತಾಪ" ಶಂಕರ ಭಟ್ಟರಿಗೆ ಅರ್ಪಿತವಾಗಿದೆ. ಆ ಕಾದಂಬರಿಯ ರಚನೆಗೂ ಶಂಕರ ಭಟ್ಟರೇ ಕಾರಣರಂತೆ. ಅದನ್ನು ಮುಳಿಯರು 'ಪಶ್ಚಾತ್ತಾಪ'ದ ಮುನ್ನುಡಿಯಲ್ಲಿ ಹೇಳಿದ್ದಾರೆ; "ನನ್ನ ತಮ್ಮ ಶಂಕರನ ಒತ್ತಾಯವೇ ಈ ಕಥಾರಚನೆಗೆ ನನ್ನನ್ನಿಳಿಸಿದುದು· ಸುಮಾರು ನಾಲ್ಕಯ್ದು ತಿಂಗಳ ಮೊದಲು, ಇದನ್ನು ಬರೆಯ ತೊಡಗಿದೆನು, ಆದರೆ, ತೊಂದರೆಗಳಿಂದಾಗಿ ಪ್ರಯತ್ನವು ಮುಂದು ವರಿಯಲಿಲ್ಲ. ಆಗಾಗಿನ ಪತ್ರಗಳಲ್ಲಿ "ಬರೆದು ಮುಗಿಸಿದೆಯೊ?" ಎಂದು ಕೇಳುತ್ತಲೇ ಇದ್ದನು. "ಇಲ್ಲ"ವೆಂದೇ ಉತ್ತರಕೊಡ ಬೇಕಾಗಿತ್ತು. ಕಳೆದ ಡಿಸೆಂಬರದಲ್ಲಿ ಬಂದವನು, ಅದೇ ಪ್ರಶ್ನೆ ಯನ್ನು ಮತ್ತೆ ಕೇಳಿದನು. ಮೊದಲಿನ ಉತ್ತರವೇ ಹೊರಡ ಬೇಕಾಯಿತು. "ನೀನು ಬರೀ ದಡ್ಡ" ಎಂದು ನಗುತ್ತ ಹೇಳಿದನು. ಹಾಗೆ ಹೋದವನು ಮತ್ತೆ ಬರಲಿಲ್ಲ. ಅವನ ಕತೆ ಹಾಗಾಯಿತು. ಈ ಕತೆ ಹೀಗೆ ತಲೆದೋರಬೇಕಾಯಿತು".

'ಪಶ್ಚಾತ್ತಾಪ' ಕಾದಂಬರಿಯಲ್ಲಿ ಮುಳಿಯರ ಬಾಳಿನ ಬಹಳ ಅಂಶಗಳು ಸೇರಿಕೊಂಡಿವೆಯಂತೆ. "ಈ ಕಥಾ ಭಾಗದಲ್ಲಿ ಕೆಲವು ನಡೆದುವುಗಳು; ಕೆಲವು ಕಲ್ಪಿಸಿದುವುಗಳು" ಎಂದು ಮುಳಿಯರೇ ಹೇಳಿದ್ದಾರೆ.

ಮುಳಿಯರಿಗೆ 1916ರಲ್ಲಿ ವಿವಾಹವಾಗಿತ್ತು. ಆ ಬಳಿಕ ಮುಳಿಯರು ಕೀರ್ತಿಶಿಖರವನ್ನು ಹಂತ ಹಂತವಾಗಿ ಏರುತ್ತ ನಡೆದರು. ನಾಡೆ ಆಡುಂಬೊಲವಾಯಿತು ಮುಳಿಯರಿಗೆ. ಕೀರ್ತಿ

ಕಾಮಿನಿ ಅವರ ಕೈಹಿಡಿದರೂ ಲಕ್ಷ್ಮಿ ಒಲಿಯಲಿಲ್ಲ. ಕೆನರಾ ಹೈಸ್ಕೂಲಿನಲ್ಲಿ ಹದಿನೇಳುವರೆ ರೂಪಾಯಿ ಇದ್ದ ಸಂಬಳ ಎಲೋಸಿಯಸ್ ಕಾಲೇಜಿಗೆ ಬರುತ್ತಾ ಮೂವತ್ತಕ್ಕೆ ಏರಿತು! 'ಎಲ್ಲಿ ಮೂವತ್ತು, ಎಲ್ಲಿ ಈ ದೊಡ್ಡ ಸಂಸಾರದ ಹೊಣೆ! ಮುಳಿಯರೋ ಸಾಹಿತ್ಯರಚನೆಯಲ್ಲಿ ತನ್ಮಯ. ಆದರೆ ಕೈಹಿಡಿದ ಮಡದಿ ದೇವಕಿ ಒಂದು ದಿನವೂ ಇದಕ್ಕಾಗಿ 'ಮರುಗಿದಳಿಲ್ಲ; ಮುನಿಸಾಂತಳಿಲ್ಲ'. ಇದ್ದುದನ್ನು ಇದ್ದಹಾಗೆ ಹೊಂದಿಸಿಕೊಂಡು ಹೋದಳು. 'ನಿನ್ನನ್ನರಪ್ಪ ಕಬ್ಬಿಗರ್ ಮನೆವಾಳ್ತೆಯೊಳೆನಿಸೊಂದುಂ ಗೊಡವೆಗೊಳ್ಳದೆ ಕೆಮ್ಮ ಕೆಮ್ಮನೆ ಪಾಳ್ಗತೆಯ ಕಬ್ಬದೊಳೇವೊಳ್ತುಂ ಬೆಮೆಗೊಂಡಿರ್ಪರಲ್ತೇ. ಅವರ್ಗೇಂ ಬಟ್ಟೆಯೊ? ಉಣಲೇಂ ತಿನಲೇಂ?" ಎಂದು ಪತಿಯೊಡನೆ ಜಗಳಾಡಿದವಳಲ್ಲ. ಮುಳಿಯರ ಜೀವಪುಷ್ಪಕ್ಕೆ ಮಣ್ಣಿನಿಂದ ಸಾರ ಹೀರಿಕೊಡುವ ಬೇರಾಗಿ ಬಾಳಿದಳು ಆಕೆ.

ಮುಳಿಯರಿಗೆ ನಾಲ್ಕು ಗಂಡು ಎರಡು ಹೆಣ್ಣು ಮಕ್ಕಳು. ಹಿರಿಯವರಾದ ಕೇಶವ ಭಟ್ಟರು ಈಗ ಮೈಸೂರು ಸರಕಾರದ ಮುಖ್ಯ ಟ್ರಾನ್ಸ್ಲೇಟರರಾಗಿದ್ದಾರೆ. ಅವರ ಅನಂತರದ ಮಹಾಬಲ ಭಟ್ಟರು ನ್ಯಾಯವಾದಿಗಳಾಗಿ ಮಂಗಳೂರಲ್ಲಿ ವಾಸಿಸಿದ್ದಾರೆ. ಅವರ ಬೆನ್ನಿನ ಗೋಪಾಲಕೃಷ್ಣ ಭಟ್ಟರು ಎಂಪ್ಲೊಯಿಸ್ ಸ್ಟೇಟ್ ಇನ್ಶೂರೆನ್ಸ್ ಕೋರ್ಪರೇಶನಿನಲ್ಲಿ ಅಧಿಕಾರಿಗಳಾಗಿ ಕಲಕತ್ತದಲ್ಲಿದ್ದಾರೆ. ಕೊನೆಯ ಮಗ ರಾಘವಯ್ಯ ಬಿಹಾರದ ಜಾದುಗೋಡ್ ಯುರೇನಿಯಮ್ ಮೈನ್ ಪ್ರೊಜೆಕ್ಟಿನ ಒಂದು ವಿಭಾಗದಲ್ಲಿ ಹಿರಿಯ ಅಧಿಕಾರಿಯಾಗಿದ್ದಾರೆ. ಮೊದಲ ಹೆಣ್ಣು ಮಗಳು ಮೂಕಾಂಬಿಕೆಯನ್ನು ಕಾಸರಗೋಡಿನ ಪರ್ತಕಜೆ ಮಹಾಲಿಂಗ ಭಟ್ಟರಿಗೆ ವಿವಾಹ ಮಾಡಿಕೊಟ್ಟಿದೆ. ಎರಡನೆಯ ಮಗಳು ಜಯಲಕ್ಷ್ಮಿ ಮಡಿಕೇರಿಯಲ್ಲಿ ಮಾದಾಪುರ ಹೈಸ್ಕೂಲಿನ ಉಪಾಧ್ಯಾಯರಾದ ರಮೇಶರ ಕೈಹಿಡಿದಿದ್ದಾಳೆ.

ಮುಳಿಯರ ಪತ್ನಿ ದೇವಕಿಯುವರ ಆರೋಗ್ಯವು ಅವರ ಕೊನೆಯ ವರುಷಗಳಲ್ಲಿ ಕೆಡುತ್ತ ನಡೆದಿತ್ತು. ವೈದ್ಯರ ಚಿಕಿತ್ಸೆ ಪ್ರಯೋಜನಕಾರಿಯಾಗಲಿಲ್ಲ. ಕೊನೆಗೆ ಇಪ್ಪತ್ತೆಂಟು ವರ್ಷಗಳ ಬನ್ನ ಬವಣೆಗಳ ಸಂಸಾರಿಕ ಜೀವನದ ಬಳಿಕ ಅವರು 1944 ನವಂಬರ 1ರಂದು ಸಂಜೆ ಐದು ಗಂಟೆಗೆ ಇಹಲೋಕವನ್ನು ತ್ಯಜಿಸಿದರು. ಆ ಹೆಣ್ಣುಜೀವದ ಬಾಳನ್ನೂ ಅದು ಇಹವನ್ನು ತೊರೆದಾಗಿನ ಮುಳಿಯರ ಮನಃಸ್ಥಿತಿಯನ್ನೂ ಅವರ ಹಿರಿಯ ಮಗ ಶ್ರೀ ಎಂ. ಕೇಶವ ಭಟ್ಟರೇ ಹೇಳಿರುವುದನ್ನು ಕೇಳಿ: "......ವರ್ಷಾಂತರಗಳ ಕಾಲ ಗಂಡನ ಬಾಳಿನಲ್ಲಿ ಸಹಭಾಗಿನಿಯಾಗಿ, ಅವರ ಕೀರ್ತಿ ಮುಗಿಲುಮುಟ್ಟಿದಾಗ ಹರ್ಷಪುಳಕಿತೆಯಾಗಿ, ಅವರ ಬನ್ನಗಳನ್ನೆಲ್ಲ ಮರುಮಾತಿಲ್ಲದೆ ಅನುಭವಿಸುತ್ತಾ, ಮೌನದುಃಖಾಕ್ರಾಂತೆಯಾಗಿ, ಕೊನೆಗೆ ಸುಮಂಗಲೀ ಮರಣವನ್ನು ಹೊಂದಿದ ಆ ಸಾಧ್ವಿಯ ಕಳೇಬರದ ಬಳಿ ನಿಂತಿದ್ದಾಗ— ತಿಮ್ಮಪ್ಪಯ್ಯನವರಿಗೆ ಹಿಂದಿನ ದಿನಗಳೆಲ್ಲ ನೆನಪಿಗೆ ಬಂದುವು. ಅಂದಿನಿಂದ ಇಪ್ಪತ್ತೆಂಟು ವರ್ಷಗಳ ಹಿಂದೆ 'ಮಾಂಗಲ್ಯ ತಂತುನಾನೇನಮಮ ಜೀವನ ಹೇತುನಾ ಕಂಠೇ ಬಧ್ನಾಮಿ ಸುಭಗೇ ತ್ವಂ ಜೀವ ಶರದಾಂ ಶತಂ" ಎಂಬ ಮಂತ್ರಘೋಷದೊಡನೆ ಆಕೆಯ ಕೊರಳಿಗೆ ಕಟ್ಟಿದ್ದ ಮಂಗಲಸೂತ್ರವನ್ನು ಹಿಡಿದು 'ಆ ಮಂತ್ರಾರ್ಥ ವಿಫಲವಾಯಿತು' ಎಂದು ಗದ್ಗದಕಂಠದಿಂದ ಉದ್ಗರಿಸಿದ ಹೃದಯವಿದ್ರಾವಕ ದೃಶ್ಯ ಇಂದೂ ನನ್ನ ಕಣ್ಣ ಮುಂದೆ ಕಟ್ಟಿದೆ. ಆಕೆಯ ಅಂತ್ಯೇಷ್ಟಿಕಾರ್ಯಗಳು ಸಿದ್ಧವಾಗುತ್ತಿದ್ದಂತೆ ಉಕ್ಕಿ ಬರುತ್ತಿದ್ದ ಕಣ್ಣೀರನ್ನು ತಡೆದುಕೊಂಡರು–

"ಕಟಿದವರ್ಗಳ್ಪುದಟ್ಟೊಡವರೇಟಿಟ್ಟೊಡಮಂತವರಿಂ ಬಟಿಕ್ಕೆ ತಾ
ಮುಟಿವೊಡಮೇಟಿರಂತವರಣಂ ತಮಗಂ ಬರ್ದುಕಿಲ್ಲ ಧರ್ಮಮಂ
ಗಟಿಯಿಸಿಕೊಳ್ವುದೊಂದೆ ಚದುರಿಂತುಟು ಸಂಸ್ಕೃತಿ ಧರ್ಮಮೇಕೆ ಬಾ
ಯಟಿವುದಿದೇಕೆ ಚಿಂತಿಸುವುದೇಕೆ ಪಲುಂಬುವುದೇಕೆ ನೋವುದೋ ॥

ಎಂದು ಪಂಪನು ಸಾರಿದ ಸಂಸ್ಕೃತಿ ಧರ್ಮವಚನ ಅವರ ತುಟಿಗಳಿಂದ ತಾನಾಗಿ ಹೊರಸೂಸಿತು......"

ಸುಖಕ್ಕೆ ಪಂಪ. ದು:ಖಕ್ಕೆ ಪಂಪ. ಈ ಹೃದಯ ವಿದ್ರಾವಕ ವಿದಾಯಕ್ಕೂ ಪಂಪನೇ !

ಶ್ರೀ ಕೇಶವ ಭಟ್ಟರು ಅದೇ ವಿಚಾರವನ್ನು ಮುಂದುವರಿಸಿ ಬರೆದಿದ್ದಾರೆ: "ಶ್ಮಶಾನಯಾತ್ರೆಯನ್ನು ಒಂದಷ್ಟು ದೂರ ಹಿಂಬಾಲಿಸಿ ಬಂದು ತಮ್ಮ ಸಹಧರ್ಮಿಣಿಯನ್ನು ಕೊನೆಯ ಬಾರಿಗೆ ಬೀಳ್ಕೊಟ್ಟರು. ಮರಳಿ ಸ್ವಸ್ಥಾನಕ್ಕೆ ಬಂದು ಕವಿರಾಜಮಾರ್ಗ ವಿವೇಕದ ರಚನೆಯಲ್ಲಿ ನಿರತರಾದರು. ಮರುದಿನ ಯಥಾಪ್ರಕಾರ ಕಾಲೇಜಿಗೆ ತೆರಳಿ ಪಾಠಪ್ರವಚನಗಳನ್ನು ನಡೆಸುವ ಹೊತ್ತಿನಲ್ಲಿ ಅವರಲ್ಲಿ ಯಾವ ಮಾರ್ಪಾಡೂ ತೋರುತ್ತಿರಲಿಲ್ಲ. ಕಾಲೇಜಿನ ಅಧಿಕಾರಿಗಳು ಈ ವಿಚಾರವನ್ನು ತಿಳಿದು 'ನೀವೇಕೆ ಈ ದಿನ ಕಾಲೇಜಿಗೆ ಬಂದಿರಿ? ತುಂಬ ದಣಿದಿದ್ದೀರಿ; ಮನೆಗೆ ಹೋಗಿ ವಿಶ್ರಮಿಸಿರಿ ಎಂದರಂತೆ. ಉತ್ತರವಾಗಿ ಅವರು 'ಮನೆಯಲ್ಲಿ ಈಗ ನನಗಿರುವುದೇನು? ವಿದ್ಯಾರ್ಥಿಗಳಿಗೆ ಪಾಠ ಹೇಳುವುದರಿಂದಲೇ ನನ್ನ ಮನಸ್ಸಿಗೆ ನೆಮ್ಮದಿ' ಎಂದರಂತೆ. ಅಧಿಕಾರಿಗಳಿಗೆ ಮಾತುಕಟ್ಟಿಹೋಯಿತು; ಕಂಠ ಬಿಗಿದು ಬಂತು."

ಆ ದಿನಗಳಲ್ಲಿ ಮುಳಿಯರ ನಡವಳಿಕೆ ಕ್ಲಾಸಿನಲ್ಲಿ ಹೇಗಿತ್ತು ಎಂಬುದನ್ನು ಅವರ ವಿದ್ಯಾರ್ಥಿಗಳೊಬ್ಬರು ಹೇಳಿದ್ದಾರೆ: "......ಕ್ಲಾಸಿಗೆ ಬರುವವರೆಗೂ ಯಾವ ಪಾಠ ಎಲ್ಲಿಂದ ಪ್ರಾರಂಭವಾಗಬೇಕೆಂಬುದನ್ನು ಮರೆತು ಯಾವುದೋ ಪ್ರಪಂಚದಲ್ಲಿ ವಿಹರಿಸುತ್ತಿದ್ದರೆಂಬಂತೆ ಕಾಣಿಸಿಕೊಳ್ಳುತ್ತಿದ್ದರು. ಆದರೆ ಇದೆಲ್ಲಾ ನಮ್ಮ ಕಲ್ಪನೆ ಎಂದು ಅನಂತರ ತಿಳಿಯುತ್ತಿತ್ತು......ಕ್ಲಾಸಿಗೆ ಬಂದರೆ ತಮ್ಮನ್ನು ಮರೆತು ವಿಷಯದಲ್ಲಿ ತಲ್ಲೀನರಾಗುತ್ತಿದ್ದರು......" ಈ ಸ್ಥಿತಪ್ರಜ್ಞತೆಯನ್ನು ಮತ್ತೆಲ್ಲಿ ಕಾಣೋಣ. ವಿದ್ಯಾದಾನದ ಈ ಅದಮ್ಯ ದಾಹವನ್ನು ಮಗುವೆಲ್ಲಿ ಅರಸೋಣ.

ಆ ಬಳಿಕ ಯಥಾಪ್ರಕಾರವಾಗಿ ಮುಳಿಯರ ಅಧ್ಯಾಪನ ನಡೆಯಿತು. ಬಾಳಿನಲ್ಲಿ ನೋವು ಇತ್ತು, ಕಾವು ಇತ್ತು. ಕಹಿಯಿತ್ತು. ಆದರೆ ವಿದ್ಯಾರ್ಥಿಗಳಿಗೆ ಕಾವ್ಯದ ಸಿಹಿಯುಣ್ಣಿಸಿದರು. ಹಾಡಿನ ಇಂಪು ಬಡಿಸಿದರು. ಅವರನ್ನು ನಗಿಸಿದರು. ಮನೆಯಲ್ಲಿ ಆಗ ತಾನೇ ಮೂರುವರ್ಷ ಕಳೆದ ತಾಯಿಸತ್ತ ಮಗು ಅಳುತ್ತಿತ್ತು. ಅದರೊಡನೆ ಅವರೂ ಅತ್ತರೊ ಏನೊ. ಆದರೆ ಕ್ಲಾಸಿಗೆ ಬಂದು ವಿದ್ಯಾರ್ಥಿಗಳೊಡನೆ ನಕ್ಕರು! ಅಳುನುಂಗಿ ನಕ್ಕರು. ಎಂದೆಂದೂ ಇವರನ್ನು ಮರೆಯದಂತಹ ಪ್ರಭಾವ ಬೀರಿದರು ವಿದ್ಯಾರ್ಥಿಗಳ ಮೇಲೆ. ಡಾ. ಶಿವರಾಮ ಕಾರಂತರು ಹೇಳಿದ್ದಾರೆ: "ಶಿಕ್ಷಕನ ನೋಗನ್ನು ಮರೆತು ಕಾವ್ಯರಸದಲ್ಲಿ ತಾನು ತಲ್ಲೀನನಾಗಿ ನಮ್ಮನ್ನು ಮೈಮರೆಸುವ ಗುಣ ಅವರ ಪಾಠಗಳಿಗಿತ್ತು ......... ಕನ್ನಡ ವಿದ್ಯಾರ್ಥಿಗಳು ಕನ್ನಡವನ್ನು ಮರೆತರೂ ಅವರನ್ನು ಮರೆಯ ಲಾರರು."

ಅಧ್ಯಾಪನ ಅವರ ಪಾಲಿಗೆ ಸಂಬಳ ತರುವ ಕೆಲಸವಾಗಿರಲಿಲ್ಲ. ಜೀವನಧರ್ಮವಾಗಿತ್ತು. ಆನಂದದ ಚಿಲುಮೆಯಾಗಿತ್ತು. ಪ್ರೀತಿಯ ಕೊಡುಕೊಳ್ಳುವಿಕೆಯ ಪವಿತ್ರಕ್ಷೇತ್ರವಾಗಿತ್ತು. ಸರಕಾರಿ ಕಾಯಿದೆಯಂತೆ 1948ನೆಯ ಮೇ 31ಕ್ಕೆ ಅವರ ಅರುವತ್ತನೆಯ ವಯಸ್ಸಿನಲ್ಲಿ ಅವರು ನಿವೃತ್ತರಾಗಬೇಕಾಯಿತು. ದೇಹವೇನೊ ಸೋತಿತ್ತು. ಆದರೆ ಮನಸ್ಸು ಬಳಲಿರಲಿಲ್ಲ. ಹೃದಯ 'ಕೊಟ್ಟು' ತಣಿದಿರಲಿಲ್ಲ.

'ನಿವೃತ್ತಿ'ಯಿಲ್ಲದೆ ಮುಳಿಯರು ನಿವೃತ್ತರಾಗಬೇಕಾಯಿತು. ಅದರ ಪರಿಣಾಮ ಮನಸ್ಸಿನ ಮೇಲಾಯಿತು. ಈಗ ಮಂಗಳೂರಲ್ಲಿ ಉಳಿಯಬೇಕಾದ ಕೆಲಸ ಏನೂ ಉಳಿಯಲಿಲ್ಲ. ಓದು ಬರಹ ಅದು ಎಲ್ಲಾದರೇನಂತೆ! ಎರಡನೆಯ ಮಗ ಮಹಾಬಲ ಭಟ್ಟರಿಗೆ ಪೆರ್ಲ ಹೈಸ್ಕೂಲಿನಲ್ಲಿ ಆಗತಾನೇ ಅಧ್ಯಾಪಕ ಕೆಲಸ ದೊರಕಿತ್ತು. ಹೇಗೂ ಅಲ್ಲಿ ಒಂದು ಮನೆಮಾಡಬೇಕು. ಅಲ್ಲಿಯೆ ವಾಸಿಸುವ

ಯೋಚನೆಯಿಂದ ಮುಳಿಯರು ಮಂಗಳೂರು ಬಿಡುವ ಯೋಚನೆ ಮಾಡಿದರು. ಆರ್ಥಿಕ ದೃಷ್ಟಿಯಿಂದ ಮಂಗಳೂರನ್ನು ಬಿಡದೆ ಇರುವುದೂ ಅಸಾಧ್ಯವಾಗಿತ್ತು.

ಮಂಗಳೂರು! ಮುಳಿಯರ ಬಾಳಿನಲ್ಲಿ ಎಷ್ಟು ಸುಖ ದುಃಖದ ಘಟನೆಗಳು ಅಲ್ಲಿ ನಡೆದುವು! 'ಕನ್ನಡ ನಾಡು ಬಲ್ಲ ಮುಳಿಯರು' ಅಲ್ಲೆ ನಿರ್ವಾಣವಾದರು! ಅವರ ತಂದೆ, ತಾಯಿ, ಮಡದಿ ಅಲ್ಲೇ ಮಡಿದು, ಅಲ್ಲೇ ಮಣ್ಣುಗೂಡಿದರು! ಅಲ್ಲೇ ಅವರ ಮಕ್ಕಳು ಹುಟ್ಟಿ, ಬೆಳೆದು ಬಂದರು! ಅಲ್ಲೇ ಅವರ ಕೃತಿ ರತ್ನಗಳು ಉದಿಸಿ ಬಂದುವು. ಎಷ್ಟು ಜನ ಮಿತ್ರರನ್ನು ಮಂಗಳೂರು ಗಳಿಸಿಕೊಟ್ಟಿತು! ಪಂಜೆ, ಪೈ, ಕಡೆಂಗೋಡ್ಲು, ಸೇಡಿಯಾಪು, ಕಾರಂತ, ಉಗ್ರಾಣ, ಉಳ್ಳಾಲ, ಶಾಸ್ತ್ರಿ, ಶೆಟ್ಟಿ ಒಬ್ಬರೆ ಇಬ್ಬರೆ! ಮಿತ್ರಮಂಡಳಿಯ ಕೂಟಗಳೇ! ಕನ್ನಡ ಕೋಗಿಲೆಯ ಕುಕಿಲೇ! 'ಮುಳಿಯ' ಹೆಸರಿಗೆ ಮಾತ್ರ ಇತ್ತು. ಮಂಗಳೂರು 'ಎಲ್ಲದಕ್ಕೂ ಆಯಿತು'!

ಅಂತಹ ಮಂಗಳೂರನ್ನು ಅವರು ಕಣ್ಣೀರು ತುಳುಕುತ್ತಿರುವಂತೆಯೆ ತೊರೆದು ಪೆರ್ಲಕ್ಕೆ ಹೊರಟರು. ಅದು ಅವರ ಹೃದಯದ ಮೇಲೆ ಮಾಡಿದ ಪರಿಣಾಮ ಅಷ್ಟಿಷ್ಟಲ್ಲ. ಪೆರ್ಲಕ್ಕೆ ಹೋಗಿ ಮಗ ಮಹಾಬಲ ಭಟ್ಟರ ಜೊತೆಗಿದ್ದ ಕೆಲಸಮಯದಲ್ಲೇ–1948 ನೇ ಸಪ್ಟಂಬರದಲ್ಲಿ–ಅವರಿಗೆ ತೀವ್ರವಾದ ಹೃದಯ ರೋಗ ಕಾಣಿಸಿಕೊಂಡಿತು. ವೈದ್ಯಕೀಯ ನೆರವಿಲ್ಲದ ಪೆರ್ಲದಿಂದ ಅವರನ್ನು ಹತ್ತಿರದ ಕಾಸರಗೋಡಿಗೆ ಕರಕೊಂಡು ಹೋಗಲಾಯಿತು. ಅಲ್ಲಿಂದ ಮತ್ತೆ ಮಂಗಳೂರಿಗೆ. ಬಹುದಿನಗಳ ಮದ್ದು, ವಿಶ್ರಾಂತಿ, ಪಥ್ಯಗಳಿಂದ ಮುಳಿಯರು ಮತ್ತೆ ಸ್ವಲ್ಪ ಚೇತರಿಸಿಕೊಂಡರು. ಆದರೂ ಪೂರ್ಣ ಚೇತರಿಸಿಕೊಳ್ಳಲಿಲ್ಲ. ಯಾವಾಗಲೆಂದರಾವಾಗ ಮತ್ತೆ ಉಲ್ಬಣವಾಗಬಹುದಾದ ಈ ರೋಗಗ್ರಸ್ತ ದೇಹ ವೈದ್ಯಕೀಯ ನೆರವಿಲ್ಲದಲ್ಲಿ ಇರುವುದು ಅಪಾಯವಾಗಿತ್ತು.

ಮಂಗಳೂರಲ್ಲೇನೊ ಉಳಿಯಬಹುದಾಗಿತ್ತು. ಆದರೆ ಎಲ್ಲಿ? ಹೇಗೆ? ಪೆರ್ಲದಲ್ಲಂತೂ ಅಸಾಧ್ಯ. ಮತ್ತೆಲ್ಲಿ? ಹಿರಿಯ ಮಗ ಕೇಶವ ಭಟ್ಟರು ಆಗ ಮದ್ರಾಸಿನಲ್ಲಿ ಸರಕಾರಿ ಹುದ್ದೆಯಲ್ಲಿದ್ದರು. ಅದು ಎಲ್ಲ ದೃಷ್ಟಿಗಳಿಂದಲೂ ಅನುಕೂಲದ ಸ್ಥಳವಾಗಿತ್ತು. ಹಿರಿಯ ಮಗನ ಜೊತೆ. ಎಲ್ಲ ವೈದ್ಯಕೀಯ ನೆರವಿನ ಶಹರ. ಕೊನೆಗೆ ಅದೇ ನಿರ್ಣಯವಾಯಿತು. 1948 ದಶಂಬರದಲ್ಲಿ ಅವರು ಮದ್ರಾಸಿಗೆ ಹೊರಟು ನಿಂತರು. 'ವ್ಯಕ್ತಿ ಮುಳಿಯ'ರಿಗೇನೊ ಮದ್ರಾಸು ಹಿತವಾಗಿತ್ತು. 'ಸಾಹಿತಿ ಮುಳಿಯ' ಹುಟ್ಟಿ ಬೆಳೆದ ಊರಿನಿಂದ, ಉಳಿದು ನಲಿದ ಆಪ್ತರಿಂದ, ಮೆರೆದು ಬಾಳಿದ ನಾಡಿನಿಂದ, ಐನೂರು ಮೈಲು ದೂರ ಸಾಗುವಾಗ ಅವರ ಹೃದಯವೇ ನೀರಾಗಿ ಹರಿದು ಬಂತು. ಕಣ್ಣಿನಿಂದ ನೀರು ತುಳುಕಿ ಬಂತು. ನಿರ್ವಾಹವಿಲ್ಲದೆ ಅವರು ಮದ್ರಾಸಿಗೆ ತೆರಳಿದರು.

ಅವರ ಕೊನೆಯ ದಿನಗಳ ಕುರಿತು ಅವರ ಹಿರಿಯ ಮಗ ಕೇಶವ ಭಟ್ಟರ ಮಾತನ್ನೆ ಕೇಳಿ: "ಮದ್ರಾಸಿಗೆ ಹೋದ ಮೇಲೆ ಪ್ರಸಿದ್ಧ ವೈದ್ಯರಿಂದ ಚಿಕಿತ್ಸೆ ನಡೆಯಿತು. ಆದರೆ ಒಂದೆರಡು ತಿಂಗಳಲ್ಲಿ ರೋಗ ಪುನಃ ಮರುಕೊಳಿಸಿತು. ಅಂದಿನಿಂದ ಅವರ ಸ್ಥಿತಿ ಆಶಾಜನಕವಾಗಿರಲಿಲ್ಲ. ಆದರೂ ಹೇಗೊ ಏನೊ ಪುನಃ ಚೇತರಿಸಿಕೊಂಡರು, ಮೆಲ್ಲ ಮೆಲ್ಲನೆ ಮನೆಯ ಹೊರಗೆ ಸುತ್ತಾಡುವುದಕ್ಕೆ ಶಕ್ತರಾದರು. ಆರೋಗ್ಯ ಸೂಚಕವಾದ ಉಲ್ಲಾಸವೂ ಕ್ರಮೇಣ ಅವರಲ್ಲಿ ಮೂಡಲಾರಂಭಿಸಿತು. ದಿನಂಪ್ರತಿ ಮುಂಜಾನೆ ಸುಮಾರು ಒಂದು ಒಂದುವರೆ ಮೈಲಿಗಳಷ್ಟು ದೂರ ವಾಯು ವಿಹಾರಕ್ಕೆ ಹೋಗಲಾರಂಭಿಸಿದರು. ಅದನ್ನು ಕಂಡ ಮಿತ್ರರೆಲ್ಲರಿಗೂ ಅವರ ಆರೋಗ್ಯ ಪೂರ್ವಸ್ಥಿತಿಗೆ ಬರುತ್ತಿರುವಂತೆ ಕಂಡಿತು. ಮೂರು ನಾಲ್ಕು ತಿಂಗಳುಗಳವರೆಗಿದ್ದ ಈ ಸ್ಥಿತಿಯಲ್ಲಿ ಅವರು ಲೇಖನೋದ್ಯಮಕ್ಕೆ ಪುನರಪಿ ಕೈಯಿಕ್ಕಿದರು.

ವಿಷ್ಟೋ ವರ್ಷಗಳ ಕಾಲ ಸಾಹಿತ್ಯೋದ್ಯಮವನ್ನು ತಮ್ಮ ಜೀವನ ಸರ್ವಸ್ವವನ್ನಾಗಿ ಮಾಡಿಕೊಂಡಿದ್ದವರು ಅದಿಲ್ಲದೆ ಹೇಗೆ ತಾನೇ ಕಾಲಯಾಪನೆ ಮಾಡಬಲ್ಲರು? ಕನ್ನಡವನ್ನು ಬಿಟ್ಟು ಉಳಿದ ಯಾವುದೂ ಅವರಿಗೆ ವಿಚಾರ್ಯ ವಿಷಯವಾಗಿರಲಿಲ್ಲ. ಇತರರು ಅವರ ಆರೋಗ್ಯದ ವಿಚಾರವನ್ನು ಚಿಂತಿಸುತ್ತಿದ್ದರೆ, ಅವರಿಗೆ "ಕನ್ನಡವನುಳಿದು ಅನ್ಯಜೀವನವಿಲ್ಲ"! ಮೊದಲೇ ವ್ಯಾಧಿಯಿಂದ ಜರ್ಜರಿತವಾದ ದೇಹ, ದೈಹಿಕ ಮಾನಸಿಕ ಶ್ರಮ ಗಳಿಂದ ಪುನಃ ನಿರ್ವಿಣ್ಣವಾಯಿತು. ವ್ಯಾಧಿ ಮರಳಿ ಬಂದು ತನ್ನ ಪ್ರಭುತ್ವವನ್ನು ಸ್ಥಾಪಿಸಿತು; ನಾಲ್ಕು ತಿಂಗಳ ಕಾಲ ಅವರನ್ನು ನರಳಾಡಿಸಿತು. ಹೃದ್ರೋಗ ಚಿಕಿತ್ಸಾಪ್ರವೀಣರಾದ ಯಾವ ವೈದ್ಯ ರಾಜರೂ ಅದನ್ನು ಜಯಿಸಲಾರದೆ ಹೋದರು. ಸಮೀಪದ ಬಂಧುಗಳಾದ ಶ್ರೀ ಕಡೆಂಗೋಡ್ಲು ಶಂಕರ ಭಟ್ಟರು ಆ ಸಂದರ್ಭ ದಲ್ಲೊಮ್ಮೆ ಮದ್ರಾಸಿಗೆ ಬಂದಿದ್ದಾಗ. ಅವರ ಮನೆಯವರನ್ನೆಲ್ಲ ಸ್ಮರಿಸಿಕೊಂಡು. ತಿಮ್ಮಪ್ಪಯ್ಯನವರು ಹಠಾತ್ತಾಗಿ 'ನಾನಿನ್ನು ಊರಿಗೆ ಮರಳುವುದುಂಟೆ?—ಇಲ್ಲ" ಎಂದು ಭವಿಷ್ಯವಾದಿ ಯಂತೆ ಉದ್ಗರಿಸಿದರು.

"೧೯೫೦ ನೆಯ ಇಸ್ವಿ ಜನವರಿ ೧೭ ರಂದು ಸುಮಾರು ಸಂಜೆ ೭-೩೦ ಗಂಟೆಗೆ ಹಾಸಿಗೆಯಲ್ಲಿ ಕುಳಿತು ಕ್ಷೀಣದನಿಯಲ್ಲಿ ಮಾತಾಡುತ್ತಿದ್ದರು. ಹಿಂದೆಯೇ ನಾನೂ ಕುಳಿತಿದ್ದೆ. ಎಂತಹ ಯಾತನೆಯನ್ನು ಅನುಭವಿಸಿದರೊ. ಏನು ಪೂರ್ವಸೂಚನೆಯನ್ನು ಕಂಡರೊ ತಿಳಿಯದು—ಒಡನೆ ಅತ್ತಿತ್ತ ನೋಡಿ. "ಸ್ನೇಹಿತರೆಲ್ಲ ಇಲ್ಲೇ ಇದ್ದಾರೆಯೇ?" ಎಂದು ಕೇಳಿದರು. ಮರುನಿಮಿಷವೇ ನನ್ನೆದೆಯ ಮೇಲೆ ಕುಸಿದುಬಿದ್ದರು. ದಿಙ್ಮೂಢನಾದ ನಾನವರನ್ನು ಹಾಸಿಗೆಯಲ್ಲಿ ಮಲಗಿಸುವದರೊಳಗೆ ಎಲ್ಲವೂ ಮುಗಿದು ಹೋಯಿತು. ಒಂದುವರೆ ವರ್ಷಗಳ ಕಾಲ ನಿರಂತರವಾಗಿ ವ್ಯಾಧಿಯೊಡನೆ ಹೋರಾಡಿ ಬಳಲಿದ ಜೀವ. ವಿಶ್ರಾಂತವಾಯಿತು.

ಅರುವತ್ತೆರಡು ವರ್ಷಗಳ ಕಾಲ ದಾರುಣವಾದ ಕಷ್ಟನಷ್ಟಗಳಿಗೆ ಗುರಿಯಾಗಿ ಶಾಂತಿಯನ್ನು ಬಯಸಿದ ದೇಹ, ಪರಮಶಾಂತಿ ಯನ್ನು ಪಡೆಯಿತು; ನಲುವತ್ತು ವರ್ಷಗಳ ಕಾಲ ಕನ್ನಡ ಭಾಷೆ ಸಾಹಿತ್ಯಗಳಿಗಾಗಿ ಶ್ರಮಿಸಿದ ಸಾಹಿತ್ಯಾತ್ಮ ವಿಶ್ವಾತ್ಮದೊಡನೆ ಲೀನವಾಯಿತು !"

ಹೀಗೆ ಹಿರಿಯ ಮಗನ ಎದೆಯ ಮೇಲೊರಗುತ್ತ ಅವರು ಕೊನೆಯುಸಿರೆಳೆದರು. ಕನ್ನಡದ ಈ ಪುಣ್ಯಜ್ಯೋತಿ ಕನ್ನಡ ನೆಲ ದಿಂದ ಬಹುದೂರದ ಮದ್ರಾಸಿನಲ್ಲಿ ನಂದಿಹೋಯಿತು. ಆದರೆ ಆ ಜ್ಯೋತಿಯಿಂದ ತಮ್ಮ ಹಣತೆಯನ್ನು ಬೆಳಗಿಸಿಕೊಂಡ ಪ್ರತಿ ಯೊಬ್ಬನೂ ಗೋರೂರು ರಾಮಸ್ವಾಮಿ ಅಯ್ಯಂಗಾರರಂತೆ "ಅವರನ್ನು ಜ್ಞಾಪಿಸಿಕೊಂಡಾಗಲೆಲ್ಲ ನನಗೆ ಗಂಗಾಸ್ನಾನ ಮಾಡಿದ ಭಾವನೆಯುಂಟಾಗುತ್ತದೆ" ಎಂದು ಈಗಲೂ ಹೃದಯತುಂಬಿ ತಲೆಬಾಗಿ ಉದ್ಗರಿಸುತ್ತಾನೆ.

"ಮುಳಿಯ ತಿಮ್ಮಪ್ಪಯ್ಯನವರದು ಬಹಳ ಸಂಕೋಚದ ಸ್ವಭಾವ. ಚೆನ್ನಾಗಿ ಪಳಗಿದ ಹೊರತು ಅವರು ಇತರರೊಂದಿಗೆ ಉಪಚಾರದ ಮೇರೆಯನ್ನು ಬಿಟ್ಟು, ಸರಳವಾಗಿ ಸರಾಗವಾಗಿ ಮಾತಾಡುತ್ತಿರಲಿಲ್ಲ. ಆದರೆ ಅತ್ಯಂತ ಸರಳ ಸ್ವಭಾವದ ಅವರು ನಾಲ್ಕಾರು ಮಾತುಗಳನ್ನಾಡುವುದರೊಳಗೆ ಒಳ್ಳೆಯ ಆತ್ಮೀಯ ಗೆಳೆಯರಾಗುತ್ತಿದ್ದರು. ಅನಂತರ ಕೇಳಬೇಕು ಅವರ ಮಾತಿನ ವೈಖರಿಯನ್ನು. ಕೇಳುವವರ ಮನಸ್ಸಿನ ಮೇಲೆ ಪರಿಣಾಮ ವನ್ನುಂಟುಮಾಡಬೇಕೆಂಬ ನಾಟಕೀಯತೆ ಅವರಿಗಿರಲಿಲ್ಲ. ಅವರು ಸರಾಗವಾಗಿ ಪ್ರಯತ್ನವೇ ಇಲ್ಲದೆ ನಲ್ಲಿಯಿಂದ ಸ್ವಾಭಾವಿಕವಾಗಿ ನೀರು ಹರಿಯುವಂತೆ ಮಾತಾಡುತ್ತಿದ್ದರು.........

"......ತಿಮ್ಮಪ್ಪಯ್ಯನವರ ಬಾಳು ಆಳವಾದ ವ್ಯಾಸಂಗ, ಅರ್ವಾಚೀನ, ಪ್ರಾಚೀನ ಸಂಸ್ಕೃತಿಗಳ ಫಲ, ಜೀವನದ ನಾನಾ ಅನುಭವಗಳ ಪರಿಪಕ್ವ ಪರಿಣಾಮ, ಸರ್ವರಲ್ಲಿಯೂ ಮೈತ್ರೀಭಾವ

ಇವುಗಳಿಂದ ಪುನೀತವಾಗಿತ್ತು. ಸೌರಭವನ್ನು ಹೊತ್ತು ತಿರುಗುವ ಗಾಳಿಯಂತೆ ಅವರ ಎಲ್ಲ ಆಚರಣೆಗಳೂ ಸದುದ್ದೇಶಪೂರಿತವಾಗಿದ್ದುವು. "ನಾಡೋಜ ಪಂಪ"ದಂತಹ ಗ್ರಂಥವನ್ನು ಬರೆದಿದ್ದರೂ, 'ಕವಿರಾಜ ಮಾರ್ಗ'ದ ನುಡಿಗಳನ್ನು ಬಾಯಲ್ಲಿ ಉಚ್ಚರಿಸುತ್ತಿದ್ದರೂ, ವ್ಯಕ್ತಿಗಳ ಸ್ನೇಹವನ್ನು ಉಳಿಸಿಕೊಂಡು ಬೆಳೆಸಿಕೊಳ್ಳುವುದೇ ಅವರ ಮುಖ್ಯ ಗುರಿಯಾಗಿತ್ತು. ಅವರೊಂದಿಗೆ ಮಾತಾಡುವವರಿಗೆ ತಾವು ತಮ್ಮ ಒಬ್ಬ ಮುಖ್ಯ ಒತ್ತೈಷಿಯ ಮುಂದೆ ಇರುವ ಭಾವ ಬರುತ್ತಿತ್ತು. ಅವರ ಮಾತೂ ಹಾಗೆ ಸರಳವೂ ಸ್ವಾಭಾವಿಕವಾದುದೂ ಆಗಿತ್ತು. ಅವರೊಂದಿಗೆ ಮಾತಾಡುವಾಗಲೆಲ್ಲ ನನಗೆ ಇವರು ಹಿಂದೆ ಪ್ರಾರಂಭಿಸಿದ ಪತ್ರಿಕೆಗೆ "ಕನ್ನಡ ಕೋಗಿಲೆ" ಎಂದು ಹೆಸರಿಟ್ಟುದು ಅವರ ಸ್ವಭಾವಕ್ಕನುಗುಣವಾಗಿದೆ ಎಂದು ಕಾಣುತ್ತಿತ್ತು" ಗೋರೂರು ರಾಮಸ್ವಾಮಿ ಅಯ್ಯಂಗಾರರಂತಹ ರಸಿಕರಿಗೆ ಪಂಡಿತ ಮುಳಿಯರು ಎಷ್ಟು ಸರಳ ವ್ಯಕ್ತಿಯಾಗಿ ಕಂಡರು! ಎಂತಹ ಸ್ನೇಹಶೀಲರಾಗಿ ತೋರಿದರು!

ಎಳೆಯ ದತ್ತಾತ್ರೇಯ ಕುಲಕರ್ಣಿಯವರು ಪುಸ್ತಕ ಮಾರಾಟಕ್ಕಾಗಿ ಧಾರವಾಡದಿಂದ ಮಂಗಳೂರಿಗೆ ಬಂದಿದ್ದರು. ಬಂದವರು ಕನ್ನಡ ದಿಗ್ಗಜ ಮುಳಿಯರನ್ನು ಕಂಡರು. 'ಕಂಡು' ಮಾರುಹೋದರು. ಅವರು ತಮ್ಮ ಅನುಭವವನ್ನು ಹೇಳಿದ್ದಾರೆ: "ಕನ್ನಡ ಪುಸ್ತಕಗಳನ್ನು ಮಾರುತ್ತ ಧಾರವಾಡದಿಂದ ಬಂದ ಹುಡುಗನನ್ನು ತಿಮ್ಮಪ್ಪಯ್ಯನವರು ಬಹಳ ಅಂತಃಕರಣದಿಂದ ಬರಮಾಡಿಕೊಂಡರು. ಕುಳ್ಳಿರಿಸಿ ತಿಂಡಿ-ಕಷಾಯಗಳ ನೈವೇದ್ಯ ಮಾಡಿ ಯೋಗಕ್ಷೇಮ ಕೇಳಿದರು. ಚಾಪೆಯ ಮೇಲೆ ನನ್ನ ಹತ್ತಿರವೇ ಕೂತುಕೊಂಡು ಬಹಳ ಆತ್ಮೀಯತೆಯಿಂದ ಮಾತಾಡಿದರು. ಹತ್ತು ಮನೆಗಳಿಗೆ ಪುಸ್ತಕ ಹೊತ್ತುಹೋಗಿ—"ಬೇಡ-ನಮಗೆ ಯಾಕೆ?" ಎನ್ನಿಸಿಕೊಂಡು ಯಾವ ಸ್ವಾಗತವನ್ನೂ ಕಾಣದೆ ಒಮ್ಮೊಮ್ಮೆ ಮಾತ್ರ ಯಾರಾದರೊಬ್ಬರು ಪುಸ್ತಕಕೊಂಡಾಗ ಆದ

ಸಮಾಧಾನ ಈ ಹಿರಿಯ ಸಾಹಿತಿಯ ಪದತಲದಲ್ಲಿ ಕುಳಿತು ಕೊಂಡಾಗ ಸೂರ್ಮಣಿಡಿಸುತ್ತಿತ್ತು. ತಾವು-ತಮ್ಮಂಥವರು ಬರೆದ ಪುಸ್ತಕಗಳು ಜನಕ್ಕೆ ಬೇಕೆನಿಸುವಂತೆ ನನ್ನಂತಹ ಹುಡುಗರು ಮನೆ ಮನೆ ತಿರುಗಬೇಕಾದುದನ್ನು ಕೇಳಿ ಅವರು ಬಹಳ ಮರುಗಿದರು. ಅದನ್ನು ಜೀವನ ವೃತ್ತಿಯಾಗಿ ಮಾಡಿ ಕೈಕೊಂಡ ನನ್ನನ್ನು ಅವರು ತಮ್ಮ ಹೃದಯ ಸಂಪತ್ತಿನಿಂದ ಸೂರೆಗೆಯ್ದರು.

"ಹೌದು ಅವರಿಗೆ ಹೃದಯವೇ ಸಂಪತ್ತಾಗಿತ್ತು. ಅದು ಸಮೃದ್ಧವಾಗಿಯೂ ಇತ್ತು. ಜೀವನದಲ್ಲಿ ಕಷ್ಟಕಾರ್ಪಣ್ಯಗಳು ಒಂದರ ಮೇಲೊಂದು ಬಂದು ಅಪ್ಪಳಿಸಿದರೂ ಜಗ್ಗದ-ಜಗ್ಗಿದರೂ ಕುಗ್ಗದ ಆ ಹೃದಯ ವೈಶಾಲ್ಯ, ಆ ಆಳದ ಅಂತಃಕರಣ, ಎಡರು ಗಳೊಡನೆ ಹೋರಾಡಿ ಇನ್ನೂ ಹರವಾಗಿ, ಇನ್ನೂ ಆಳವಾಗಿ ಹಬ್ಬಿ ಹರಿದದ್ದನ್ನೂ, ಊರಿ ಇಳಿದದ್ದನ್ನೂ ನಾವು ತಿಮ್ಮಪ್ಪಯ್ಯ ನವರ ಜೀವನದಿಂದ ಕಂಡುಕೊಳ್ಳಬಹುದಿತ್ತು.

"ನನ್ನನ್ನು ತನ್ನ ಮನೆಯಂಗಳದಿಂದ ಮನದಂಗಳಕ್ಕೆ ಕರೆದು ಕೊಂಡು ತಿಮ್ಮಪ್ಪಯ್ಯನವರು ನನ್ನ ಉಪಚಾರಕ್ಕೆ ಮಕ್ಕಳಂತೆ ಓಡಾಡಿದರು. ತಿಂಡಿ ತೀರ್ಥವಾದ ಮೇಲೆ ನಾನು ಅವರ "ಸೊಬಗಿನ ಬಳ್ಳಿ" ಕಾವ್ಯದ ಕೆಲವು ನುಡಿಗಳನ್ನು ಓದಿ ತೋರಿಸಲು ಕೇಳಿಕೊಂಡೆ. ಯಾವ ಆಡಂಬರದ ಮಾತೂ ಇಲ್ಲದೆ ತಮ್ಮದೇ ಆದ ಪಂಡಿತರ ಧಾಟಿಯಲ್ಲಿ ಪದಗಳನ್ನು ಬಿಡಿಸಿಯೂ, ಬಿಡಿಸ ದೆಯೂ, ಮುಖದ ಮೇಲೆ ಆಶ್ಚರ್ಯ ಆನಂದಗಳನ್ನು ಬರೆದು ಕೊಂಡಂತೆ ಸಾಭಿನಯವಾಗಿ ಪದ್ಯಗಳನ್ನು ಓದಿದರು......"

ಎಲ್ಲಿ ಕನ್ನಡದ ಪುಸ್ತಕಗಳನ್ನು ಮಾರಾಟಮಾಡುವ ಹುಡುಗ ದತ್ತಾತ್ರೇಯ ಕುಲಕರ್ಣಿ, ಎಲ್ಲಿ "ನಾಡೋಜ ಪಂಪ"ನನ್ನು ಬರೆದ, ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದ ಪಂಡಿತ ಮುಳಿಯ ತಿಮ್ಮಪ್ಪಯ್ಯನವರು! ಮುಳಿಯರ ಮನಸ್ಸಿನಲ್ಲಿ ಅದು ಬರಲೇ ಇಲ್ಲ. ಅವರು ಇಷ್ಟೆ ಭಾವಿಸಿದರು ತಾನು ಕನ್ನಡ ಭುವನೇಶ್ವರಿಯ

ಅರ್ಚಕ, ಈ ಹುಡುಗ ಆಕೆಯ ಭಕ್ತ. ಆತ ಬೇಡಿದ ಪ್ರಸಾದ ನೀಡುವುದು ತನ್ನ ಧರ್ಮ. ಇಲ್ಲಿ ಇಲ್ಲ ಏರು-ತಗ್ಗು; ಹಿರಿದು-ಕಿರಿದು !

ಶ್ರೀ ವೈ. ಶೇ. ಅನಂತಪದ್ಮನಾಭರಾಯರು ಮುಳಿಯರ ಸಂಪರ್ಕದಲ್ಲಿ ತಮಗೆ ದೊರೆತ ಅನುಭವವನ್ನು ಬರೆಯುತ್ತಾ ಹೇಳಿದರು: "ಒಮ್ಮೆ ಮಂಗಳೂರು-ಕೊಡಗು ಪ್ರಾಂತಸಮಿತಿಯ ಅಧಿವೇಶನಕ್ಕೆ ಮಂಗಳೂರಿಗೆ ಹೋಗಿದ್ದಾಗ ನಾನು ಅವರ (ಮುಳಿಯರ) ಮನೆಯಲ್ಲೇ ಇದ್ದೆ ...... ಆ ದಿವಸ ತಾವೇ ಕಾಫಿ ತಯಾರಿಸಿದ್ದರು. ನೀವು ಕಾಫಿ ಬೆಳೆಯುವ ಸೀಮೆಯಿಂದ ಬಂದವರು. ನಿಮ್ಮ ಸೀಮೆಯವರಿಗಿಂತಲೂ ರುಚಿಕರವಾದ ಕಾಫಿ ಕೊಡಬಲ್ಲರೆಂದು ತೋರಿಸಲು ನಾನೇ ಕಾಫಿ ತಯಾರಿಸಿದ್ದೇನೆ-ಇಗೊಳ್ಳಿ ಎಂದು ಕಾಫಿ ಕೊಟ್ಟರು. ನಿಜವಾಗಿಯೂ ಅಮೃತಪ್ರಾಯವಾಗಿತ್ತು.

"...... ನಾನು ಉಡುಪಿಗೆ ಹೊರಡಬೇಕಾಗಿತ್ತು......ತಾವೇ ನನ್ನ ಹಾಸಿಗೆ ಕಟ್ಟನ್ನು ಹೊತ್ತರು. ನಾನು ಬೇಡವೆಂದು ಎಷ್ಟು ಪರಿಯಾಗಿ ಹೇಳಿದರೂ ಕೇಳದೆ ಜೊತೆಯಲ್ಲಿ ಹೊರಟರು......"

ಇದೆಂತಹ ಸಜ್ಜನಿಕೆ, ಸರಳತೆ. ಸ್ನೇಹಪರತೆ! ಹಮ್ಮು-ಬಿಮ್ಮನರಿಯದ ಈ ಪಂಡಿತವ್ಯಕ್ತಿ ಬಾಳನ್ನು ಬಂಗಾರವಾಗಿ ಬಾಳಿದರು. ದು:ಖದ ಕುಲುಮೆಯಲ್ಲಿ ಬೇಯುತ್ತ, ಆ ಬಂಗಾರ ಪುತ್ಥಳಿಯಾಯಿತು. ಅಕಾಲದ ನೋವು ಆ ಜೀವವನ್ನು ಹುಳಿಯಾಗಿಸಲಿಲ್ಲ. ಮಾಗಿಸಿತು. ಹಣ್ಣಾಗಿಸಿತು. ಸಿಹಿಯಾಗಿಸಿತು. ದಿನಗಳೆದಂತೆ ಬನ್ನಬವಣೆಗಳು ಹೆಚ್ಚಿದಂತೆ ಆ ಜೀವ ಮಧುರತರವಾಯಿತು !

ದಿ। ಹುರುಳಿ ಭೀಮರಾಯರು ಬರೆದರು: "ಕೇಳಿದವರಿಗೆಲ್ಲ ಕೇಳಿದಷ್ಟು ಕೊಟ್ಟು ಸಹಾಯಮಾಡುವ ಹಣಕಾಸಿನ ಪೆಟ್ಟಿಗೆ ಅವರಲ್ಲಿರಲಿಲ್ಲ. ಕೇಳಿದವರಿಗೆಲ್ಲ ಕೇಳಿದಷ್ಟು ಕೊಟ್ಟು ತೃಪ್ತಿ

ಪಡಿಸುವಷ್ಟು ವಾಙ್ಮಯ ಭಂಡಾರ ಅವರಲ್ಲಿತ್ತು. ಅದೇ ಅವರಲ್ಲಿ ಏನಿತ್ತೊ ಅದನ್ನೆ ಬಂದಬಂದವರಿಗೆಲ್ಲ ಬೊಗಸೆ ಬೊಗಸೆಯಾಗಿ ದಾನಮಾಡಿದರು............

"ಶ್ರೀ ತಿಮ್ಮಪ್ಪಯ್ಯನವರ ಗುಣಾತಿಶಯಗಳನ್ನು ಹೇಳಿದಷ್ಟು ಸ್ವಲ್ಪವೇ. ಅವರದು ಸಾತ್ತ್ವಿಕ ಸ್ವಭಾವ, ಮೃದುಮನಸ್ಸು, ನಗುಮುಖ, ಪ್ರಸನ್ನ ಶಾಂತ ಚಿತ್ತವೃತ್ತಿ. ಗೌರವ ಗಂಭೀರಭಾವ. ವಿದ್ಯಾರ್ಥಿಗಳ ಮೇಲೆ ನಿರ್ಮಲಪ್ರೇಮ. ಒಡನಾಡಿಗಳೊಡನೆ ನಯವಿನಯ ಸೌಜನ್ಯದ ವರ್ತನೆ. ಅವರು ನಿರಹಂಕಾರ, ನಿರ್ವಂಚನೆ, ಸಮಭಾವನೆಗಳ, ಸರಳ ಜೀವನದ ಪ್ರತಿರೂಪ!"

ಮುಳಿಯರ ಒಂದೇ ಒಂದು ಚಟವೆಂದರೆ ಹೊಗೆಸೊಪ್ಪಿ ನೊಡನೆ ತಾಂಬೂಲ ಚರ್ವಣ. ಅದು ಸದಾ ಕಾಲವೂ ಬೇಕು. ಈ ಅಭ್ಯಾಸವ ಕುರಿತು ಅವರ ಮಿತ್ರರೊಬ್ಬರು ಅವರೊಡನೆ ಚರ್ಚಿಸಿದಾಗ ಮುಳಿಯರು ಹೇಳಿದರಂತೆ: 'ತುಳಸಿ ಹೇಗೆ ವಿಷ್ಣು ವಿಗೆ ಪ್ರಿಯವೊ, ಬಿಲ್ವ ಹೇಗೆ ಶಿವನಿಗೆ ಪ್ರಿಯವೊ, ಹೊಗೆಸೊಪ್ಪು ಹಾಗೆಯೇ ಬ್ರಹ್ಮನಿಗೆ ಪ್ರಿಯವಾದುದು. ಸರಸ್ವತಿಯ ಪ್ರೀತ್ಯರ್ಥ ವಾಗಿ ಯಾಗದ ಹೊಗೆಯಿಂದ ಬ್ರಹ್ಮ ಹೊಗೆಸೊಪ್ಪು ಸೃಷ್ಟಿಸಿದ. ಇದು ಬ್ರಹ್ಮ–ಸರಸ್ವತಿಯರಿಗೆ ಪ್ರಿಯವಾದುದು' ಎಂದು ತಮ್ಮ ಚಟವನ್ನು ಸಮರ್ಥಿಸಿಕೊಂಡರಂತೆ!

ಮುಳಿಯರು ಪ್ರತಿಭಾವಂತ ಕವಿ, ಶ್ರೇಷ್ಠ ವಿದ್ವಾಂಸ, ಉತ್ತಮ ಗಮಕಿಗಳಾಗಿದ್ದಂತೆಯೇ ಮೇಲ್ಮಟ್ಟದ ಸಂಶೋಧಕರೂ ಆಗಿದ್ದರು. ದಿ. ಮಂಜೇಶ್ವರ ಗೋವಿಂದ ಪೈಗಳು "ಶ್ರೀ ಶ್ರೀ ತಿಮ್ಮಪ್ಪಯ್ಯನವರಿಗೆ ಸಾಹಿತ್ಯದಲ್ಲೇ ಅಲ್ಲ, ವ್ಯಾಕರಣದಲ್ಲೂ, ಇತಿಹಾಸದಲ್ಲೂ, ಸಂಶೋಧನೆಯಲ್ಲೂ ತುಂಬ ವೈದುಷ್ಯ ವಿದ್ದಿತು," ಎಂದು ಮೆಚ್ಚುನುಡಿ ಆಡಿದರು. ಈ ಕುರಿತು ಬರೆ ಯುತ್ತಾ ಶ್ರೀ ಸ. ಸ. ಮಾಳವಾಡರು "ಪಂಡಿತ ತಿಮ್ಮಪ್ಪಯ್ಯ ನವರ ಆಧಾರನಿರೂಪಣೆ, ವಿವೇಚನೆಯ ಹದ ಇವು ಪ್ರತಿಪಕ್ಷಿ

ಗಳಿಗೂ ಮನವರಿಕೆ ಮಾಡಿಕೊಡುವ ರೀತಿಯಲ್ಲಿವೆ" ಎಂದು ಹೊಗಳಿದರು.

ಮುಳಿಯರ ಕನ್ನಡ ಸಾಹಿತ್ಯಾಭ್ಯಾಸ ಪ್ರಾಚೀನದಿಂದ ಮೊದಲಾಗಿ ಅರ್ವಾಚೀನಕ್ಕೆ ನಡೆದುಬಾರದೆ ಅರ್ವಾಚೀನದಿಂದ ಮೊದಲುಗೊಂಡು ಪ್ರಾಚೀನದೆಡೆಗೆ ಹೆಜ್ಜೆಯಿಕ್ಕಿತು. ಅವರು ಹತ್ತೊಂಬತ್ತನೆಯ ಶತಮಾನದ ಕೊನೆಯಲ್ಲಿದ್ದು ಇಪ್ಪತ್ತನೆಯ ಶತಮಾನದ ಅರುಣೋದಯಕ್ಕೆ ಕಣ್ಮುಚ್ಚಿದ ಮುದ್ದಣನನ್ನು ಸವಿದು, ಹದಿಮೂರನೆಯ ಶತಮಾನದ ಆಂಡಯ್ಯನಲ್ಲಿ ಸುಖಿಸಿ, ಹತ್ತನೆಯ ಶತಮಾನದ ಪಂಪನನ್ನು ಈಸಿ, ಒಂಬತ್ತನೆಯ ಶತಮಾನದ ಕವಿರಾಜ-ಮಾರ್ಗಕಾರನಲ್ಲಿ ಮುಳುಗಿದರು.

ಮುಳಿಯರ ಮೊದಲಕೃತಿ "ಚಂದ್ರಾವಲೀ ವಿಲಾಸಂ" ಅವರು ಮುದ್ದಣನ ಅದ್ಭುತ ರಾಮಾಯಣ ಮತ್ತು ರಾಮಾಶ್ವಮೇಧಗಳನ್ನು ಅಭ್ಯಾಸಮಾಡಿದ ಫಲ. ರಾಮಾಶ್ವಮೇಧದ ಮುದ್ದಣ-ಮನೋರಮೆಯರಂತೆಯೇ ಚಂದ್ರಾವಲೀ ವಿಲಾಸದಲ್ಲಿ ಕಬ್ಬಿಗರಾಣ್ಮ-ಆತನ ಮಡದಿ ಭಾರತಿಯರಿದ್ದಾರೆ. "ನೀಂ ರಾಧಾವಿಲಾಸಮಂ ಪೇಳ್ದ ಬಳಿಯಂ ಕೃಷ್ಣನಿನ್ನೊರ್ವಳಂ ವರಿಸಿದ ಕತೆಯಂ ಪೇಳ್ವೆನೆಂದೆಯಲ್ತೆ? ಅದನೆ ನಲ್ಮೆಯಿನೊರೆದೊಡಾಯ್ತು" ಎಂದು ಪತಿಯು "ಕಥಾಮೃತಮಂ ಪೀರಲ್ ಆತುರದೊಳಿರ್ಪ" ಸತಿ ಭಾರತಿಯನ್ನು ಸಂತೋಷಪಡಿಸಲು "ಪೇಳ್ದಪೆನೆಲೆ ಕಾಂತಾಮಣಿ !" ಎಂದು ತೊಡಗಿ ಚಂದ್ರಾವಲೀ ವಿಲಾಸವನ್ನು ವಿಸ್ತರಿಸುತ್ತಾನೆ ಕವಿ. ಈ ಕಾವ್ಯದಲ್ಲಿ ಉದ್ದಕ್ಕೂ ಮುದ್ದಣನ ಪ್ರಭಾವ ಎದ್ದು ಕಾಣುತ್ತದೆ. ಗ್ರಂಥದ ಪ್ರಾರಂಭದಲ್ಲಿ ಮುಳಿಯರೇ ಹೇಳಿದ್ದಾರೆ "ಇದು 'ಅದ್ಭುತ ರಾಮಾಯಣ', 'ರಾಮಾಶ್ವಮೇಧಂ' ಗಳೆಂಬ ಆರಾಮಗಳಲ್ಲಿ ವಿಹರಿಸಲಿಚ್ಛಿಸುವವರಿಗೆ ಪ್ರವೇಶದ್ವಾರವಾಗಿದೆ."

"ಕಾದಂಬರೀ ಸಂಗ್ರಹ" ವೆಂಬ ಮಾಸಪತ್ರಿಕೆಯಲ್ಲಿ ಮೊದಲು ಅಚ್ಚಾಗಿ, ಆ ಬಳಿಕ 1931ರಲ್ಲಿ ಸೈಂಟ್ ಎಲೋಸಿಯಸ್ ಕಾಲೇಜಿನ

ಕನ್ನಡ ಸಂಘದ ಮೂಲಕ ಪ್ರಕಟವಾದ "ಸೊಬಗಿನ ಬಳ್ಳಿ" ಆಂಡಯ್ಯನ ಕಬ್ಬಿಗರ ಕಾವದಿಂದ ಪ್ರೇರಣೆಗೊಂಡುದು ಹಿಂದಿನವರು ಮಾತ್ರವಲ್ಲ 'ಈಗಿನವರೂ ಕೂಡಾ ನಡೆಯುವಷ್ಟು ಅಚ್ಚವಾಗಿ ಅಚ್ಚಗನ್ನಡ ಕಾವ್ಯಮಾರ್ಗವು ಇದೆಯೆಂಬುದನ್ನು ಕಾಣಿಸಲಿಕ್ಕಾಗಿ' ಮುಳಿಯರು 'ಸೊಬಗಿನ ಬಳ್ಳಿ' ಕಾವ್ಯವನ್ನು ಬರೆದರು. ಇದರ ಮೊದಲಲ್ಲಿ ಮುಳಿಯರು ಕನ್ನಡಿಗರಿಗೆ ಒಂದು ಕಿವಿ ಮಾತು ಹೇಳಿದರು; "ಈ ನನ್ನ ಪ್ರಯತ್ನವನ್ನು ನೋಡಿ ಕನ್ನಡಿಗರು 'ಸಂಸ್ಕೃತ ವಿರೋಧಿ ಇವನು' ಎಂದು ಭಾವಿಸಬಾರದು. ಸಂಸ್ಕೃತಾಭಿಮಾನವು ಎಲ್ಲರಂತೆ ನನ್ನಲ್ಲೂ ಇದೆ......ಕನ್ನಡ ಸಾಹಿತ್ಯದಿಂದ ಸಂಸ್ಕೃತವನ್ನು ನೂಕಿ ಬಿಡಬೇಕೆಂಬ ಭಾವನೆಯೂ ನನ್ನದಲ್ಲ......ಆದರೆ ಎಲ್ಲೆಲ್ಲಿಯೂ ಸಂಸ್ಕೃತವನ್ನು ತುರುಕಿಸಬೇಕು; ಸಂಸ್ಕೃತವನ್ನುಳಿದರೆ ಕನ್ನಡ ಅಸ್ತಿತ್ವವೇ ಇಲ್ಲದಂತೆ; ಎಂಮು ಹೇಳುವವರ ಸಂಸ್ಕೃತಾತಿಕ್ರಮವು ಮಾತ್ರ ಯೋಗ್ಯವಲ್ಲವೆಂಬುದನ್ನು ತಿಳಿಸಲಿಕ್ಕಾಗಿ, ಈಗಿನ ಕಾಲದಲ್ಲಿಯೂ ಕನ್ನಡದ ಸ್ವಾತಂತ್ರ್ಯವನ್ನು ತೋರಿಸಲಿಕ್ಕಾಗಿ ಮಾತ್ರವೇ ಇದನ್ನು ಬರೆದುದು." ಈ ಛಲದಲ್ಲಿ ಮುಳಿಯರು ಸೋತಿಲ್ಲವೆಂಬುದು ಸಂತೋಷದ ಸಂಗತಿ. ಅಭಿಮಾನದ ಸಂಗತಿ. ಆಂಡಯ್ಯನು ಸತ್ತ ಏಳು ಶತಮಾನಗಳ ಬಳಿಕ ಕನ್ನಡನಾಡು ಮುಳಿಯರಲ್ಲಿ ಮತ್ತೊಬ್ಬ ಆಂಡಯ್ಯನನ್ನು ಪಡೆಯಿತು.

ಮೊದಲು ಮನೆಯ ಬಾಗಿಲಿನ ಮುದ್ದಣನ ಪುಷ್ಕರಿಣಿಯಲ್ಲಿ ಮನದಣಿಯೆ ಮಿಂದು ಪುಳಕಿತರಾಗಿ, ಪುನೀತರಾದ ಮುಳಿಯರು ದೂರದ ನದಿ ಆಂಡಯ್ಯನಲ್ಲಿ ಕೈಬೀಸಿ ಈಜಿ ಸುಖಿಸಿದರು. ಈಗ ಮುಳಿಯರ ಕೈ ಬಲಿತಿತ್ತು; ಸಾಹಸ ಹಸಿದಿತ್ತು; ಚೇತನ ಚಡಪಡಿಸಿತ್ತು. ಇನ್ನು ಅವರಿಗೆ ನದಿ ಸಾಕಾಗದು! ಈಗ ಸಾಗರವೇ ಬೇಕಾಯಿತು. ಅವರು ಪಂಪನಸಾಹಿತ್ಯ ಶರಧಿಗೆ ಧುಮುಕಿದರು. ಆ ಶರಧಿಯಲ್ಲಿ ಅವರು ಮನದಣಿಯೆ ಈಸಿದರು. ಆ ಈಜಿನ

ಮೋಜು ಅನ್ಯತ್ರ ಕಾಣದ್ದು. ಅವರು ಅಲ್ಲಿಂದ ಅಂದು ಹೆಕ್ಕಿತಂದ ಮುತ್ತುಗಳು–ನಾಡೋಜ ಪಂಪ, ಆದಿಪುರಾಣ ಸಂಗ್ರಹ, ಸಮಸ್ತ ಭಾರತ ಸಾರ–ಇಂದೂ ಎಣೆಯಿಲ್ಲದ್ದು.

ಮುಳಿಯರ ಕೊನೆಯ ದಿನಗಳಲ್ಲಿ ಅವರಿಗೆ ಈ ಸಾಹಸವೂ ಸಾಲದೆನಿಸಿತು. ಎಲ್ಲಿ ಕನ್ನಡ ಸಾಹಿತ್ಯಗಂಗೆ ಮೊತ್ತಮೊದಲು ವ್ಯಕ್ತವಾಗಿ ಸಮರ್ಥವಾಗಿ ಪ್ರವಹಿಸಿದಳೊ ಆ ಮೂಲದ–ಕವಿರಾಜಮಾರ್ಗದ ದುರ್ಗಮ ಪ್ರದೇಶಕ್ಕೆ ಯಾತ್ರೆ ಹೊರಟು ಅಲ್ಲಿನ ಕತ್ತಲು ತುಂಬಿದ ಸಂದುಗೊಂದುಗಳಲ್ಲಿ ತಮ್ಮ ತಿಳಿವಿನ ಬೆಳಕು ಹಚ್ಚಿ ನೋಡತೊಡಗಿದರು. 'ಕವಿರಾಜಮಾರ್ಗ ವಿವೇಕ'ದ ಮೊದಲ ಭಾಗ ಬೆಳಕು ಕಂಡಿತು. ಎರಡನೆಯ ಭಾಗವೂ ಸಿದ್ಧವಾಯಿತು. ಕವಿರಾಜಮಾರ್ಗದಲ್ಲಿ ಬೀಜರೂಪವಾಗಿದ್ದ ಒಂದು ಒಂದು ಪಾತ್ರ ಮುಳಿಯರ ಮನಸ್ಸಿನ ನೆಲದಲ್ಲಿ ಬಿದ್ದು ಮೊಳಕೆಯೊಡೆದು ಬೆಳೆದು ಹೂಬಿಟ್ಟು ವೀರಬಂಕೆಯ ಕಾದಂಬರಿಯಾಗಿ ಅರಳಿ ಪರಿಮಳಿಸಿತು. ಈ ವೇಳೆಗೆ ಮುಳಿಯರ ದೇಹ ಸೋತಿತ್ತು, ಆದರೆ ಚೇತನ ಸೋತಿರಲಿಲ್ಲ. ಅದು ಅದಮ್ಯ ಉತ್ಸಾಹದೊಡನೆ ಮುನ್ನುಗ್ಗ ಬಯಸುತ್ತಿತ್ತು. ಕೊನೆಗೂ ಈ ಚೇತನದ ಮುನ್ನುಗ್ಗುವಿಕೆಯನ್ನು ತಡೆದುಕೊಳ್ಳಲಾರದೆ ಆ ದೇಹ ಕುಸಿದು ಬಿತ್ತು. ಮುಳಿಯರ ಭೌತಿಕದೇಹ ಅಳಿಯಿತು. ಸೇಡಿಯಾಪು ಬಣ್ಣಿಸಿದ "ಕನ್ನಡದ ತಿರುಳನ್ನು ಕಂಡು ಉಂಡು ಉಣಿಸಿದ ಪಂಡಿತರಲ್ಲಿ, ಕನ್ನಡಕಾವ್ಯ ಪಾಠಕದಲ್ಲಿ ಪರಮೋಚ್ಚ" ಜೀವವೊಂದು ಕಣ್ಮರೆಯಾಯಿತು.

ಹೀಗೆ ಇರುವಷ್ಟು ದಿನ ಮುಳಿಯರು ದೊಡ್ಡವರಾಗಿ ಬಾಳಿದರು. ವಿದ್ವಾಂಸರಾಗಿ ಮನ್ನಣೆ ಪಡೆದರು. ಕವಿಗಳಾಗಿ ಮೆರೆದರು. ಗಮಕಿಗಳಾಗಿ ಜನಮನವನ್ನು ಸೂರೆಗೊಂಡರು. ಸಂಶೋಧಕರಾಗಿ ವೈಯಾಕರಣಿಗಳಾಗಿ ಕೀರ್ತಿಗಳಿಸಿದರು. ಅಧ್ಯಾಪಕರಾಗಿ ಗೌರವಾದರ ಪಡೆದರು. ವ್ಯಕ್ತಿಯಾಗಿ ಹತ್ತಿರ

ಬಂದವರ ಮನದಲ್ಲಿ ಮನೆಮಾಡಿದರು. ಕೊನೆಗೆ ಕಾಲ ಬಂದಾಗ ಅವರ ಕಾಯ ಮಣಿಯಿತು. ಆದರೆ ಮುಳಿಯರ ಹೆಸರಿನ ಮುಂದೆ ಕಾಲವೇ ಮಣಿಯಬೇಕಾದೀತು! ಕನ್ನಡ ಸಾಹಿತ್ಯೇತಿಹಾಸದಲ್ಲಿ ಮುಳಿಯರ ಹೆಸರು ಎಂದೂ ಅಳಿಯದ ಹೆಸರು. ಶಾಶ್ವತವಾಗಿ ಉಳಿಯುವ ಹೆಸರು. ಕನ್ನಡ ಸಾಹಿತ್ಯದ ನೆಲವನ್ನು ಹೊಸಕಾಲದ ಹೊಸ ಉದ್ಯಮಕ್ಕೆ ಹದಮಾಡಿ ಹಸನುಗೊಳಿಸಿದ ಆಚಾರ್ಯಪುರುಷರ ಸಾಲಿನಲ್ಲಿ ಮುಳಿಯರ ಹೆಸರು ಮೊದಲ ಸಾಲಿನಲ್ಲಿ ಸದಾಕಾಲಕ್ಕೂ ಇರುತ್ತದೆ.

# ಅನುಬಂಧ I

## ಮುಳಿಯ ತಿಮ್ಮಪ್ಪಯ್ಯನವರ ಜೀವನದ ಕೆಲವು ಮೈಲಿಗಲ್ಲುಗಳು

| | |
|---|---|
| ಜನನ | 3–3–1888 |
| ಮನೆಯನ್ನು ತೊರೆದು ದೇಶಾಂತರ ಹೊರಟುದು | 1906 |
| ಮನೆಗೆ ಹಿಂದಿರುಗಿದುದು | 1910 |
| ಕೆನರಾ ಹೈಸ್ಕೂಲಿನಲ್ಲಿ ಕನ್ನಡ ಪಂಡಿತರಾಗಿ ಸೇರಿದುದು | 1911 |
| ಚಂದ್ರಾವಳಿ ವಿಲಾಸ ಬರೆದು ಪ್ರಕಟಿಸಿದುದು | 1913 |
| ತಂದೆ ಕೇಶವ ಭಟ್ಟರು ಮೃತರಾದುದು | 1914 |
| 'ಕನ್ನಡ ಕೋಗಿಲೆ' ಪತ್ರಿಕೆಯ ಸಂಪಾದಕತ್ವ | 1915 |
| ಮದುವೆಯಾದುದು | 1916 |
| ಸೈಂಟ್ ಎಲೋಸಿಯಸ್ ಕಾಲೇಜಿಗೆ ಅಧ್ಯಾಪಕರಾಗಿ ಸೇರಿದ್ದು | 13–9–1918 |
| "ಕನ್ನಡ ಕೋಗಿಲೆ" ನಿಂತುಹೋದುದು | 1919 |
| ತಾಯಿ ಮೂಕಾಂಬಿಕೆ ಮೃತರಾದುದು | 1919 |
| ಸಾಹಿತ್ಯ ಸಮ್ಮೇಳನದಲ್ಲಿ ಮೊದಲ ಸಲ ಲೇಖನ ಬರೆದು ಓದಿದ್ದು | 1927 |
| ಕಾರವಾರದಲ್ಲಿ ಸೇರಿದ ಹದಿನೇಳನೆಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದುದು ಡಿಸೆಂಬರ | 1931 |
| ತಮ್ಮ ಶಂಕರ ಭಟ್ಟರು ಮೃತರಾದುದು | 1934 |
| ನಾಡೋಜ ಪಂಪ ಕೃತಿ ಪ್ರಕಟವಾದುದು | 1938 |
| ಲಕ್ಷ್ಮೇಶ್ವರದಲ್ಲಿ ನಡೆದ ಆದಿಪಂಪನ ಸಹಸ್ರ ಸಾಂವತ್ಸರಿಕೋತ್ಸವದ ಅಧ್ಯಕ್ಷತೆ | 24–12–1941 |
| ಧರ್ಮಪತ್ನಿ ದೇವಕಿ ಮೃತರಾದುದು | 1–11–1945 |
| ಕವಿರಾಜ ಮಾರ್ಗ ವಿವೇಕ ಪ್ರಕಟವಾದುದು | ಮಾರ್ಚಿ 1948 |

ಸೈಂಟ್ ಎಲೋಸಿಯುಸ್ ಕಾಲೇಜಿನಿಂದ
ನಿವೃತ್ತರಾದುದು 31–5–1948

ವೀರ ಬಂಕೆಯ ಐತಿಹಾಸಿಕ ಕಾದಂಬರಿ
ಪ್ರಕಟವಾದುದು ಸಪ್ಟಂಬರ 1948

(ಮುಳಿಯರ ಕೊಟ್ಟಕೊನೆಯ ಪ್ರಕಟಿತ ಪುಸ್ತಕ)

ಪ್ರಥಮ ಸಲ ಹೃದಯರೋಗ ಕಾಣಿಸಿಕೊಂಡುದು
ಸಪ್ಟಂಬರ 1948

ಮದ್ರಾಸಿಗೆ ತೆರಳಿದುದು ಡಿಸೆಂಬರ 1948

ಮೃತರಾದುದು 16–1–1950

# ಅನುಬಂಧ II

## ಮುಳಿಯ ತಿಮ್ಮಪ್ಪಯ್ಯನವರ ಕೃತಿಗಳು

1. ಚಂದ್ರಾವಳೀ ವಿಲಾಸಂ (ಹಳಗನ್ನಡ ಗದ್ಯಕಾವ್ಯ 1913)
2. ಸೊಬಗಿನ ಬಳ್ಳಿ (ಪದ್ಯ ಕಾವ್ಯ 1917)
3. ನಡತೆಯ ನಾಡು (ಸಂಗೀತ ನಾಟಕ 1917)
4. ಬಡ ಹುಡುಗಿ (ಕಥನ ಕಾವ್ಯ 1917)
5. ಹಗಲಿರುಳು (ನಾಟಕ 1918)
6. ಪಶ್ಚಾತ್ತಾಪ (ಕಾದಂಬರಿ 1934)
7. ನಾಡೋಜ ಪಂಪ (ಪಂಪನ ಜೀವನ ಮತ್ತು ಆತನ ಕೃತಿಗಳ ಸಮೀಕ್ಷೆ 1938)
8. ನವನೀತ ರಾಮಾಯಣ (ರಗಳೆ ಕಾವ್ಯ 1940)
9. ಆದಿಪುರಾಣ ಸಂಗ್ರಹ (ಪಂಪನ ಆದಿಪುರಾಣದ ಗದ್ಯ ಸಂಗ್ರಹಾನುವಾದ)
10. ಸಮಸ್ತ ಭಾರತಸಾರ (ಪಂಪ ಭಾರತದ ಗದ್ಯಾನುವಾದ 1941)
11. ತ್ರಿಪುರ ದಾಹ (ಶಿಸುಮಾಯಣನ ಸಾಂಗತ್ಯ ಕಾವ್ಯದ ಗದ್ಯಾನುವಾದ 1941)
12. ಶಿವರಾಮು ಚರಿತ (ನತ್ರವೆಟ್ಟುವ ಹಾಡು 1943)
13. ಪಾರ್ತಿಸುಬ್ಬ (ಯಕ್ಷಗಾನ ಕವಿ ಪಾರ್ತಿಸುಬ್ಬನ ಜೀವನ ಮತ್ತು ಕೃತಿ ಸಮೀಕ್ಷೆ 1945)
14. ಕವಿರಾಜಮಾರ್ಗ ವಿವೇಕ ಭಾಗ 1 (ಕಾವ್ಯ ಮತ್ತು ಕಾವ್ಯಕರ್ತೃವಿನ ಕುರಿತ ವಿವೇಚನೆ 1948)
15. ವೀರ ಬಂಕೆಯ (ಐತಿಹಾಸಿಕ ಕಾದಂಬರಿ 1948)

## ಮುಳಿಯ ತಿಮ್ಮಪ್ಪಯ್ಯನವರ ಮರಣಾನಂತರದ ಪ್ರಕಟಣೆಗಳು

16. ಕನ್ನಡ ಸಾಹಿತ್ಯ ಮತ್ತು ಇತರ ಉಪನ್ಯಾಸಗಳು (ಲೇಖನಗಳ ಸಂಗ್ರಹ 1950 ಕರ್ಣಾಟಕ ಸಂಘ ಸೈಂಟ್ ಎಲೋಸಿಯಸ್ ಕಾಲೇಜು)
17. ಕನ್ನಡನಾಡೂ ದೇಶಿ ಸಾಹಿತ್ಯವೂ (ಮೂರು ಉಪನ್ಯಾಸಗಳ ಸಂಗ್ರಹ 1954. ಕನ್ನಡ ಸಂಶೋಧನ ಸಂಸ್ಥೆ ಧಾರವಾಡ)
18. ರಾವುತ ರಂಗಪ್ಪ (ಗೀತಾ ನಾಟಕ (ಅಪೂರ್ಣ) 1959 ನಡೆದು ಬಂದ ದಾರಿ ಸಂಪುಟ ೧)

## ಮುಳಿಯ ತಿಮ್ಮಪ್ಪಯ್ಯನವರ ಅಪ್ರಕಟಿತ ಕೃತಿಗಳು

1. ಪ್ರೇಮಪಾಶ (ಕಾದಂಬರಿ) (ಮೈಸೂರಿನ ಕಾದಂಬರಿ ಸಂಗ್ರಹದಲ್ಲಿ ಪ್ರಕಟವಾಗಿತ್ತಂತೆ)
2. ಕವಿರಾಜಮಾರ್ಗ ವಿವೇಕ (ಭಾಗ ೨)
3. ಸಂಸ್ಕೃತಿ
4. ಸೂರ್ಯಕಾಂತಿ ಕಲ್ಯಾಣ (ಯಕ್ಷಗಾನ ಕೃತಿ)

ಇವಲ್ಲದೆ ಅವರೇ ಸಂಪಾದಿಸುತ್ತಿದ್ದ 'ಕನ್ನಡ ಕೋಗಿಲೆ' ಮತ್ತು ಕರ್ಣಾಟಕದ ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಕಟವಾಗಿರುವ ಹಲವಾರು ಬರಹಗಳು.

## ಮುಳಿಯ ತಿಮ್ಮಪ್ಪಯ್ಯನವರ ಕುರಿತು

ಶ್ರದ್ಧಾಂಜಲಿ (ಮುಳಿಯ ತಿಮ್ಮಪ್ಪಯ್ಯ ಸ್ಮಾರಕ ಗ್ರಂಥ 1957)
ಪ್ರಕಾಶಕರು: ತೆಕ್ಕುಂಜ ಗೋಪಾಲಕೃಷ್ಣ ಭಟ್ಟ, ಎಂ.ಎ.
ಮುಳಿಯ ಸ್ಮಾರಕ ಸಮಿತಿ, ಮಂಗಳೂರು-3.

ದಿವಂಗತ ಶ್ರೀ ಮುಳಿಯ ತಿಮ್ಮಪ್ಪಯ್ಯನವರು: (ಜೀವನ ಚಿತ್ರ
196 ನಡೆದು ಬಂದ ದಾರಿ ಸಂಪುಟ ೩)
ಲೇಖಕರು: ಶ್ರೀ ಎಂ. ಕೇಶವ ಭಟ್ಟರು.

## ಅಚ್ಚಿನಲ್ಲಿ

ಮುಳಿಯ ತಿಮ್ಮಪ್ಪಯ್ಯನವರು (ಜೀವನ ಚರಿತ್ರೆ ಮತ್ತು ಕೃತಿ
ಸಮೀಕ್ಷೆ) ಲೇಖಕರು: ಶ್ರೀ ತೆಕ್ಕುಂಜ
ಗೋಪಾಲಕೃಷ್ಣ ಭಟ್ಟರು.
ಪ್ರಕಾಶಕರು: ಕನ್ನಡ ಸಾಹಿತ್ಯ ಪರಿಷತ್ತು

# ನವೋದಯ
# ಪ್ರಚಾರ ಪುಸ್ತಕ ಮಾಲೆ

**ಅಚ್ಚಾದುವು:**

ಕಲಾವಿದ ಕೃಷ್ಣ ಹೆಬ್ಬಾರರು
ಬೇಂದ್ರೆ
ಕಾರ್ಲ್ ಮಾರ್ಕ್ಸ್
ಶಿವರಾಮ ಕಾರಂತ
ಶ್ರೀ ಪು. ತಿ. ನರಸಿಂಹಾಚಾರ್ಯರು
ಟಿ. ಎಸ್. ಈಲಿಯಟ್
ಮಾಸ್ತಿ ವೆಂಕಟೇಶ ಅಯ್ಯಂಗಾರ್
ಕಡೆಂಗೋಡ್ಲು ಶಂಕರ ಭಟ್ಟರು
ಶ್ರೀರಂಗ
ಅ. ನ. ಕೃಷ್ಣರಾಯರು
ಬದುಕುವ ದಾರಿ
ಶ್ರೀ ಕೃಷ್ಣ ಬೌತ್ಯ
ಶ್ರೀ ಪುರಂದರ ದಾಸರು
ಸೇಡಿಯಾಪು ಕೃಷ್ಣ ಭಟ್ಟರು
ಮುದ್ದಣ
ಗೋವಿಂದ ಪೈ ಕಾವ್ಯಗಳು
ವಿ. ಸೀ.
ಹುರುಳಿ ಭೀಮರಾಯರು
ಮುಳಿಯ ತಿಮ್ಮಪ್ಪಯ್ಯ

**ಅಚ್ಚಿನಲ್ಲಿ:**

ಉಗ್ರಾಣ ಮಂಗೇಶರಾಯರು
ಕನ್ನಡ ಕಟ್ಟಿದವರು
ಎಸ್. ವೆಂಕಟರಾಜ
ಪಂಜೆ ಮಂಗೇಶರಾಯರು
ಕೈಯಾರ ಕಿಞ್ಞಣ್ಣ ರೈ